# ಹಣತೆ

ಸಂಪುಟ - 9
ಏಪ್ರಿಲ್-ಜೂನ್
2006
ಸಂಚಿಕೆ - 4



ಶಿವರಾಮಕಾರಂತ ವೇದಿಕೆಯ ಮುಖಪತ್ರಿಕೆ



ಕೆ.ಎಸ್. ನಿಸಾರ್ ಅಹಮದ್



# ಶಿವರಾಮ ಕಾರಂತ ವೇದಿಕೆ (ರಿ.)

'ಆದರ್ಶ', ನಂ. 307, 17ನೇ ಅಡ್ಡ ರಸ್ತೆ, 2ನೇ ವಿಭಾಗ
ರವೀಂದ್ರನಾಥ ಟಾಗೋರ್‌ನಗರ, ಬೆಂಗಳೂರು-560 032
ದೂರವಾಣಿ : 23336822 / 23336087
ಇ-ಮೇಲ್: pcchadaga@hotmail.com

## ಕಾರ್ಯಕಾರಿ ಮಂಡಳಿ

ಅಧ್ಯಕ್ಷರು : ಶ್ರೀಮತಿ ಪ್ರೇಮಾಭಟ್

ಉಪಾಧ್ಯಕ್ಷರು : ಶ್ರೀಮತಿ ರಾಧಾ ರಾಮಸ್ವಾಮಿ
ಶ್ರೀ ಎಸ್.ಆರ್. ವಿಜಯಶಂಕರ್

ಕಾರ್ಯದರ್ಶಿ : ಶ್ರೀ ಪಾ. ಚಂದ್ರಶೇಖರ ಚಡಗ

ಸಹಕಾರ್ಯದರ್ಶಿ : ಡಾ|| ಆರ್.ಆರ್. ಪಾಂಗಾಳ್

ಖಜಾಂಚಿ : ಶ್ರೀ ವಿ.ಟಿ.ಎಸ್. ರಾವ್

## ಕಾರ್ಯಕಾರಿ ಸಮಿತಿಯ ಸದಸ್ಯರು

ಸರ್ವಶ್ರೀ

1. ಬಿ.ವಿ. ಕೆದಿಲಾಯ
2. ಸಾ.ರಾ. ವಾರಂಬಳ್ಳಿ
3. ಸೀತಾರಾಮ್ ಪಿ.ಎಚ್‌ಡಿ.
4. ನಾ. ರಾಮಸ್ವಾಮಿ
5. ಎ.ಎಸ್. ಭಟ್
6. ಎ. ವಾಸುದೇವರಾವ್
7. ಶ್ರೀಮತಿ ಶ್ಯಾಮಲಾ ಸತ್ಯ
8. ಶ್ರೀ ರಾ.ಶ್ರೀ. ನಾಯ್ಡು

ವ್ಯವಸ್ಥಾಪಕ ಸಂಪಾದಕರು : ಶ್ರೀ ಪಾ. ಚಂದ್ರಶೇಖರ ಚಡಗ

ಗೌರವ ಸಂಪಾದಕರು : ಶ್ರೀ ಬಿ.ವಿ. ಕೆದಿಲಾಯ

ಖಾಸಗಿ ಪ್ರಸಾರಕ್ಕೆ ಮಾತ್ರ



# ಹಣತೆ

ಶಿವರಾಮ ಕಾರಂತ ವೇದಿಕೆಯ ಮುಖಪತ್ರಿಕೆ

ಸಂಪುಟ 9 ಏಪ್ರಿಲ್ - ಜೂನ್ 2006 ಸಂಚಿಕೆ - 4

## ಈ ಸಂಚಿಕೆಯಲ್ಲಿ..........

ಪ್ರಿಯ ಓದುಗ,

ಇಪ್ಪತ್ತನೆಯ ಶತಮಾನದ ವಿಸ್ಮಯಗಳಲ್ಲಿ ಒಂದೆನಿಸಿದ ಶಿವರಾಮ ಕಾರಂತರ ನೆನಪು ಜನಮಾನಸದಲ್ಲಿ ಸ್ಥಿರವಾಗಿದ್ದರೂ,ಕರ್ನಾಟಕದಲ್ಲಿ ಆಗಿ ಹೋದ ವಿವಿಧ ಸರಕಾರಗಳು ಅವರ ಬಗ್ಗೆ ಅವಜ್ಞೆ ಮತ್ತು ಪಕ್ಷಪಾತದ ಧೋರಣೆಯನ್ನೇ ತೋರಿಸುತ್ತಾ ಬಂದಿವೆ ಎಂದು ಹೇಳದೆ ವಿಧಿಯಿಲ್ಲ. ಕಾರಂತರ ಕೃತಿಗಳನ್ನು ಪುನರ್‌ಮುದ್ರಿಸುವ ಕೆಲಸ, ಕಾರಂತರು ತಮ್ಮ ಜೀವಿತದ ಕಡೆಯ ದಿನಗಳನ್ನು ಕಳೆದ ಶ್ರೀಮತಿ ಮಾಲಿನಿ ಮಲ್ಯರ ಸ್ವಗೃಹ ಸಾಲಿಗ್ರಾಮದ 'ಮಾನಸ'ವನ್ನು ಶಿವರಾಮ ಕಾರಂತರ ಮ್ಯೂಸಿಯಂ ಆಗಿ ಮಾಡುವ ಅವರ ಪ್ರಯತ್ನಕ್ಕೆ ಅಲ್ಪ ಬೆಂಬಲ , ಪುತ್ತೂರಿನ ಬಾಲಭವನದ ಖರೀದಿ (ತದನಂತರ ಅದರ ಬಗ್ಗೆ ನಿರ್ಲಕ್ಷ್ಯ) ಕಾರಂತರ ಹೆಸರಿನಲ್ಲಿ ಅಲೆವೂರಿನ ಬಳಿ ಚುನಾವಣೆಗೆ ಮುನ್ನ ಕಾರಂತ ಕಲಾಗ್ರಾಮಕ್ಕೆ ಶಂಕುಸ್ಥಾಪನೆ (ಅನಂತರ ಸಂಪೂರ್ಣ ಮರೆವು) ಇವಿಷ್ಟೇ ಈತನಕ ಸರಕಾರದ ಕೊಡುಗೆಯಷ್ಟೆ .ಪಿಳಿಕುಳದ ನಿಸರ್ಗಧಾಮಕ್ಕೆ ಶಿವರಾಮಕಾರಂತರ ಹೆಸರನ್ನಿಡುವ ಬಗ್ಗೆ ಮಾನ್ಯ ಜೆ.ಎಚ್.ಪಟೇಲರುಮುಖ್ಯಮಂತ್ರಿಗಳಾಗಿದ್ದಾಗ ನಿರ್ಧರಿಸಿದ್ದರೂ ಈ ತನಕ ಆ ಕೆಲಸ ಆಗಿಲ್ಲ. ಕುವೆಂಪುರವರ ಜನ್ಮಸ್ಥಳವಾದ ಕುಪ್ಪಳಿ ಸಾಹಿತ್ಯಾರಾಧಕರ ಯಾತ್ರಾಸ್ಥಳವಾಗಿ ಪರಿವರ್ತಿಸಲು ಉತ್ಸುಕವಾದ, ಅವರ ಜನ್ಮಶತದಿನೋತ್ಸವದ ಹೆಸರಿನಲ್ಲಿ ಲಕ್ಷಗಟ್ಟಲೆ ಹಣವನ್ನು ವ್ಯಯಿಸಿದ ಸರಕಾರಕ್ಕೆ ಕರ್ನಾಟಕಕ್ಕೆ ಕಾರಂತರ ಕೊಡುಗೆ ನಗಣ್ಯವಾಗಿ ಕಂಡಿದೆಯೇ? ಕಾರಂತರಂತಹ ಮಹಾನ್‌ವ್ಯಕ್ತಿಯ ಬಗ್ಗೆ ಆಗಬೇಕಾದಷ್ಟು ಕೆಲಸಗಳು ಆಗಿಲ್ಲವೆನ್ನುವುದೇ ಸಖೇದಾಶ್ಚರ್ಯವನ್ನುಂಟು ಮಾಡುತ್ತದೆ.

ತಮ್ಮ ಜೀವನದುದ್ದಕ್ಕೂ ಜಾತೀಯತೆಯನ್ನು ವಿರೋಧಿಸುತ್ತಾ, 70 ವರ್ಷಗಳ ಹಿಂದೆಯೇ ಸ್ವತಃ ಅಂತರ್‌ಜಾತೀಯ ವಿವಾಹದ ಮೂಲಕ ಸಾಮಾಜಿಕ ಕ್ರಾಂತಿಯ ಹರಿಕಾರರಾಗಿದ್ದ ಕಾರಂತರಿಗೂ ಜಾತೀಯ ರಾಜಕಾರಣದಿಂದ ಹಾಗೂ ಪ್ರಾದೇಶಿಕ ಭಿನ್ನತೆಗಳಿಂದ ಸಿಗಬೇಕಾಗಿದ್ದ ಸ್ಥಾನಮಾನಗಳು ಸಿಗಲಿಲ್ಲ ಮಾತ್ರವಲ್ಲ, ಅವರ ಜೀವನದ ಕೊನೆಯ ಕ್ಷಣಗಳನ್ನು ದುರ್ಭರಗೊಳಿಸಿದ''ಕೀರ್ತಿ'' ಅವರ ಸುತ್ತಲಿನ ಸಮಾಜಕ್ಕೆ ಸಲ್ಲಬೇಕು. ಏನೇ ಇರಲಿ, ತಡವಾಗಿಯಾದರೂ ನಮ್ಮ ಸರಕಾರ ಎಚ್ಚೆತ್ತು ಕಾರಂತರ ಹೆಸರಿನಲ್ಲಿ ಬೆಂಗಳೂರಿನಲ್ಲಿ ಒಂದು ಭವನ, ಅಲ್ಲಿ ಒಂದು ಸುಸಜ್ಜಿತ ರಂಗಮಂದಿರ, ಮಕ್ಕಳ ಕ್ರೀಡಾಂಗಣ, ಸಂಶೋಧನಾ ಕೇಂದ್ರ ಇವುಗಳನ್ನು ಸ್ಥಾಪಿಸುವ ಕುರಿತು ಸಮಸ್ತ ಕನ್ನಡಿಗರೂ ಸರಕಾರದ ಮೇಲೆ ಒತ್ತಾಯ ತರಬೇಕು. ಈ ದಿಸೆಯಲ್ಲಿ 1993ರಲ್ಲಿ ಸ್ಥಾಪಿತವಾಗಿ, ಸದ್ದುಗದ್ದಲಗಳಿಲ್ಲದೆ ಸಾಹಿತ್ಯಿಕ ಕೆಲಸಗಳನ್ನು ಮಾಡುತ್ತಾ ಬಂದಿರುವ ಶಿವರಾಮ ಕಾರಂತ ವೇದಿಕೆ ಸರಕಾರದೊಂದಿಗೆ ಕೈ ಜೋಡಿಸಲು ಸಿದ್ಧವಾಗಿದೆ. ಈ 13 ವರ್ಷಗಳಿಂದಲೂ ಸರಕಾರದಿಂದ ಒಂದು ರೂಪಾಯಿ ಅನುದಾನ ಕೂಡ ಪಡೆಯದ ಹೆಗ್ಗಳಿಕೆ, ಯಾವುದೇ

ರಾಜಕಾರಣಿಯನ್ನು ಓಲೈಸದೆ ನಿರಂತರವಾಗಿ ಕಾರಂತರ ಮತ್ತು ಇತರ ಶ್ರೇಷ್ಠ ಸಾಹಿತಿಗಳ ಕುರಿತು ಉಪನ್ಯಾಸ, ಅಧ್ಯಯನ ಶಿಬಿರ, ನಾಟಕ ಯಕ್ಷಗಾನ ಪ್ರದರ್ಶನ , ಕವಿಗೋಷ್ಠಿ , ಸುಗಮ ಸಂಗೀತ , ಚಿತ್ರ ಮತ್ತು ಪುಸ್ತಕ ಪ್ರದರ್ಶನ ಮುಂತಾದ ವಿವಿಧ ಚಟುವಟಿಕೆಗಳನ್ನು ಮಾಡಿಕೊಂಡು ಬಂದಿರುವ ಶಿವರಾಮ ಕಾರಂತ ವೇದಿಕೆ ಕಾರಂತ ಭವನದ ನಿರ್ಮಾಣಕ್ಕೆ ಸರಕಾರವನ್ನು ಆಗ್ರಹಿಸುತ್ತದೆ.

11.06.06ರಂದು ಶಿವರಾಮ ಕಾರಂತ ವೇದಿಕೆ ಮತ್ತು ತರಳಬಾಳು ಕೇಂದ್ರಗಳ ಜಂಟಿ ಆಶ್ರಯದಲ್ಲಿ ಡಿ.ವಿ.ಜಿ.ಯವರ 'ಬಾಳಿಗೊಂದು ನಂಬಿಕೆ ' ಕೃತಿಯ ಕುರಿತು ಡಾ। ಎಂ.ಸಿ. ಪ್ರಕಾಶ ಅವರು ಒಂದು ಉತ್ತಮ ಉಪನ್ಯಾಸವನ್ನು ನೀಡಿದರು. ಆ ಕಾರ್ಯಕ್ರಮದ ವರದಿ ಈ ಸಂಚಿಕೆಯಲ್ಲಿದೆ. ದೇವರ ಅಸ್ತಿತ್ವದ ಕುರಿತು ಶಿವರಾಮ ಕಾರಂತ ಮತ್ತು ಡಿ.ವಿ.ಜಿ.ಯವರು ಭಿನ್ನ ದೃಷ್ಟಿಕೋನಗಳನ್ನು ಹೊಂದಿದ್ದರೂ, ಡಿ.ವಿ.ಜಿ.ಯವರ ''ನಾವು ಹೇಗೆ ನಡೆದುಕೊಂಡರೆ ನಮ್ಮ ಸುತ್ತಮುತ್ತಣ ಯಾರ ಬಾಳಿಗೂ ಕೇಡಾಗದೆ , ಎಲ್ಲರ ಬಾಳೂ ಸೊಗಸುಗೊಂಡು ನಮ್ಮ ಬಾಳು ಸೊಗಸಾಗುತ್ತದೆಯೋ ಅಂಥ ನಡವಳಿಕೆ ಧರ್ಮ'' ಎನ್ನುವ ಮಾತನ್ನು ಗಮನಿಸಿದರೆ ಕಾರಂತರ ಹಾಗೂ ಡಿ.ವಿ.ಜಿ. ಯವರ ವಿಚಾರಗಳಲ್ಲಿ ಸಾಮ್ಯವೂ ಕಂಡು ಬರುತ್ತದೆ.

ಜೀವನದಿಂದ ವಿಮುಖರಾಗಿ ಪರಲೋಕ ಚಿಂತನೆಯಲ್ಲಿ ಮಗ್ನರಾಗುವುದನ್ನು ಇಬ್ಬರೂ ವಿರೋಧಿಸಿದ್ದಾರೆ.ಜೀವನೋತ್ಸಾಹ, ಪುರುಷ ಪ್ರಯತ್ನ ಮತ್ತು ಲೋಕ ಸ್ನೇಹ ಈ ಮೂರು ಗುಣಗಳು ನಮ್ಮ ಜನರ ಸ್ವಭಾವದಲ್ಲಿ ಪ್ರಬಲವಾಗಿರಬೇಕು ಎಂಬ ಡಿ.ವಿ.ಜಿ. ಯವರ ಮಾತು ಕಾರಂತರಿಗೂ ಒಪ್ಪಿಗೆಯಾದುದು.

ಈ ವರ್ಷದ ಮಾಸ್ತಿ ಪ್ರಶಸ್ತಿಗೆ ಕವಿ ನಿಸಾರರ ಆಯ್ಕೆ ಆಗಿರುವುದು ಕನ್ನಡಿಗರಿಗೆಲ್ಲ ಸಂತಸವನ್ನು ನೀಡಿದೆ. ಈ ಸಂಚಿಕೆಯಲ್ಲಿ ಅವರ ಕುರಿತು ಒಂದು ಲೇಖನವಿದೆ. ಶ್ರೀ ಮೋಹನ್ ವೆರ್ಣೇಕರರು ರಚಿಸಿದ ಚುಕ್ಕಿ ಚಿತ್ರ ಈ ಸಂಚಿಕೆಯ ಮುಖಪುಟವನ್ನು ಅಲಂಕರಿಸಿದೆ. ಅವರಿಗೆ ನಮ್ಮ ಧನ್ಯವಾದಗಳು.

ಹಣತೆಯಲ್ಲಿ ಪ್ರಕಟಣೆಗೆ ಕತೆ, ಕವನ, ವಿಮರ್ಶಾತ್ಮಕ ಲೇಖನಗಳನ್ನು ಹಿರಿ ಕಿರಿಯ ಸಾಹಿತಿಗಳಿಂದ ಆಹ್ವಾನಿಸುತ್ತಿದ್ದೇವೆ. ಪ್ರಕಟವಾದ ಬರೆಹಗಳಿಗೆ ಸೂಕ್ತ ಸಂಭಾವನೆ ಇದೆ. ಹಣತೆಯಲ್ಲಿ ಪ್ರಕಟವಾದ ಲೇಖನಗಳ ಬಗ್ಗೆ ಓದುಗರ ಪ್ರತಿಕ್ರಿಯೆಗೆ ಸ್ವಾಗತವಿದೆ.

ಇಂತು ನಿಮ್ಮ

**ಪ್ರಾ. ಚಂದ್ರಶೇಖರ ಚಡಗ**

ವ್ಯವಸ್ಥಾಪಕ ಸಂಪಾದಕ

# ಕವಿವರ ನಿಸಾರ್ ಅಹಮದ್

- ಬಿ.ವಿ. ಕೆದಿಲಾಯ

ಹೊಸಗನ್ನಡದ ಮಹತ್ವದ ಕವಿಗಳಲ್ಲಿ ಗಣ್ಯರಾದ ಪ್ರೊ. ಕೆ. ಎಸ್. ನಿಸಾರ್ ಅಹಮದ್ ಅವರಿಗೆ ಈ ವರ್ಷದ ಪ್ರತಿಷ್ಠಿತ ಮಾಸ್ತಿ ಪ್ರಶಸ್ತಿ ದೊರೆತಿರುವುದು ಸಾಹಿತ್ಯ ಪ್ರೇಮಿಗಳಿಗೆಲ್ಲಾ ಸಂತೋಷದ ಸಂಗತಿ. ಕಳೆದ ಸುಮಾರು ಅರ್ಧ ಶತಮಾನದಿಂದ ಅವ್ಯಾಹತವಾಗಿ ಸತ್ವಪೂರ್ಣವೂ, ಮೌಲಿಕವೂ ಆದ ಕಾವ್ಯ ಕೃಷಿ ಮಾಡುತ್ತ ಉತ್ತಮ ಫಸಲನ್ನೂ ನೀಡಿದ ಕೀರ್ತಿ ಅವರದು. ನಿಸಾರ್ ಅವರು ಸಹಜ ಕವಿ. ಅವರು ಯಾವುದೇ ಪಂಥ, ವಾದ, ಸಿದ್ಧಾಂತದ ಕಟ್ಟಿಗೆ ಸಿಲುಕಿಕೊಳ್ಳದೆ ಬದುಕಿನ ವಿಭಿನ್ನ ಸ್ತರದ ಅನುಭವಗಳನ್ನೂ ಭಾವನೆಗಳನ್ನೂ ಯಥಾವತ್ತಾಗಿ ಸ್ವೀಕರಿಸಿ, ಅದನ್ನು ತಮ್ಮದೇ ಆದ ವಿಶಿಷ್ಟ ಭಾಷೆಯಲ್ಲಿ ಕಾವ್ಯರೂಪದಲ್ಲಿ ಪುನಃ ಸೃಷ್ಟಿಸುವುದರಲ್ಲಿ ಸಫಲರಾಗಿದ್ದಾರೆ. ಅವರ ಕಾವ್ಯದಲ್ಲಿ ಕಂಡು ಬರುವ ವಸ್ತು ವೈವಿಧ್ಯ, ಭಾವ ವೈವಿಧ್ಯ, ವಿಚಾರ ವೈವಿಧ್ಯ, ಅನುಭವ ವೈವಿಧ್ಯ, ಛಂದೋ ವೈವಿಧ್ಯಗಳು ಓದುಗರನ್ನು ಬೆರಗುಗೊಳಿಸುವಂಥವು. ಅವರು ಬಳಸುವ ಕನ್ನಡ ಭಾಷೆಯಲ್ಲಿ ಕಂಡುಬರುವ ವಿಶಿಷ್ಟತೆ, ಸೂಕ್ಷ್ಮತೆ, ಪ್ರಯೋಗಶೀಲತೆ, ರೋಚಕತೆ ಅಸಾಧಾರಣವಾದುದು. ನವ್ಯದ ಉಚ್ಛ್ರಾಯ ಕಾಲದಲ್ಲಿ ಅಡಿಗರ ದೈತ್ಯ ಪ್ರತಿಭೆಯ ಪ್ರಖರ ಪ್ರಭೆಯಲ್ಲಿ ಅನೇಕ ಸಮರ್ಥ ಕವಿಗಳೂ ಕೊಂಚ ನಿಸ್ತೇಜರಾಗಿ ಕಂಡಾಗಲೂ, ನಿಸಾರ್ ಕಾವ್ಯ ತನ್ನ ಬೆಳಕನ್ನು ಬೀರುತ್ತಲೇ ಇತ್ತು. ನವೋದಯದ ಪ್ರಜ್ಞೆಯೊಂದಿಗೆ ನವ್ಯಪ್ರಜ್ಞೆಯನ್ನೂ ರೂಢಿಸಿಕೊಳ್ಳುವುದರಲ್ಲಿ ಯಶಸ್ವಿಯಾದ ಅವರು ತಮ್ಮ ಸಾಂಸ್ಕೃತಿಕ ಹಿನ್ನಲೆಯ ವಿಶಿಷ್ಟ ಅನುಭವಗಳನ್ನೂ, ಸಂವೇದನೆಯನ್ನೂ, ಉರ್ದು ಭಾಷೆಯ ಸೊಗಡನ್ನೂ ಅತ್ಯಂತ ಪರಿಣಾಮಕಾರಿಯಾಗಿ ಬಳಸಿಕೊಂಡು ಉತ್ತಮ ಕಾವ್ಯವನ್ನು ನೀಡುವುದರಲ್ಲಿ ಅಪೂರ್ವ ಯಶಸ್ಸನ್ನು ಪಡೆದಿದ್ದಾರೆ. ಅವರ 'ನಿತ್ಯೋತ್ಸವ', 'ಎಲ್ಲ ಮರೆತಿರುವಾಗ' ಮುಂತಾದ ಅನೇಕ ಸುಂದರ, ಸುಕೋಮಲ ಭಾವಗೀತೆಗಳು ಸಹೃದಯ ಓದುಗರನ್ನಷ್ಟೇ ಅಲ್ಲ, ಸುಗಮ ಸಂಗೀತಗಾರರ ಕಂಠಗಳಿಂದಲೂ, ಕ್ಯಾಸೆಟ್‌ಗಳಿಂದಲೂ ದೇಶ ವಿದೇಶಗಳಲ್ಲಿರುವ ಲಕ್ಷಾಂತರ ಕನ್ನಡಿಗರ ಹೃದಯಗಳನ್ನು ತಲುಪಿವೆ. ತಣಿಸಿವೆ. ಈ ಹಾಗೆಯೇ ಅವರ ವ್ಯಂಗ್ಯ ವಿಡಂಬನೆ ಕವನಗಳೂ ಸೂಕ್ಷ್ಮ ಸಂಕೀರ್ಣ ಅನುಭವಗಳ ಸಮರ್ಥ ಅಭಿವ್ಯಕ್ತಿಗಳಾಗಿರುವ ಗಂಭೀರ, ಚಿಂತನ ಶೀಲ ಕವನಗಳೂ, ಯಶಸ್ವೀ ರಚನೆಗಳಾಗಿ ಓದುಗರ ಮೇಲೆ ಗಾಢ ಪ್ರಭಾವವನ್ನು ಬೀರುತ್ತವೆ.

'ನಿತ್ಯೋತ್ಸವ' 'ಮನಸು ಗಾಂಧಿ ಬಜಾರು' 'ನೆನೆದವರ ಮನದಲ್ಲಿ', 'ಸುಮುಹೂರ್ತ' 'ಸಂಜೆ ಐದರ ಮಳೆ' 'ನಾನೆಂಬ ಪರಕೀಯ' 'ಅನಾಮಿಕ ಆಂಗ್ಲರು' 'ಸ್ವಯಂ ಸೇವೆಯ ಗಿಳಿಗಳು,' 'ಬಹಿರಂತರ' - ಇವು ನಿಸಾರ್ ಅವರ ಪ್ರಸಿದ್ಧ ಕವನ ಸಂಕಲನಗಳು. ಈ ಶೀರ್ಷಿಕೆಗಳೇ ಅವರ ಕಾವ್ಯದ ವ್ಯಾಪಕತೆಯನ್ನೂ, ವಸ್ತು ವೈವಿಧ್ಯತೆಯನ್ನೂ ಸೂಚಿಸುತ್ತವೆ. ಕಾವ್ಯದಲ್ಲಿ ವೈಯಕ್ತಿಕ ಅನುಭವವನ್ನು ಸಾರ್ವತ್ರಿಕಗೊಳಿಸುವ ಸಾಮರ್ಥ್ಯವನ್ನು ಅವರ ಕವನಗಳಲ್ಲಿ ನೋಡಬಹುದು. ಉದಾಹರಣೆಗೆ 'ನಿಮ್ಮೊಡನಿದ್ದೂ ನಿಮ್ಮಂತಾಗದೆ' ಎಂಬ ಅವರ ಪ್ರಸಿದ್ಧ ಕವನವನ್ನೇ ಗಮನಿಸಬಹುದು. ಮುಸ್ಲಿಂ ಸಮುದಾಯಕ್ಕೆ ಸೇರಿರುವ ಕವಿಯ ವಿಶಿಷ್ಟ ಅನುಭವ ಈ ಕವನದ ಮೂಲದ್ರವ್ಯವಾದರೂ, ಜಾತಿ ವ್ಯವಸ್ಥೆಯಿಂದ ವಿಭಜಿತರಾಗಿರುವ ನಮ್ಮ ದೇಶದ ಯಾವುದೇ ವ್ಯಕ್ತಿಗೆ ಈ ಅನುಭವ ಅನ್ವಯವಾಗುವುದರಿಂದ ಕವನಕ್ಕೆ ಒಂದು ವಿಶೇಷವಾದ ಸಾರ್ವತ್ರಿಕತೆ ಹಾಗೂ ಧ್ವನಿ ಶ್ರೀಮಂತಿಕೆ ಬಂದಿವೆ. ಒಂದು ಜಾತಿಗೆ ಸೇರಿದ ಜನರ ಕೂಟದಲ್ಲಿ ಬೇರೊಂದು ಜಾತಿಗೆ ಸೇರಿದ ವ್ಯಕ್ತಿ ಭಾಗವಹಿಸಬೇಕಾಗಿ ಬಂದಾಗ, ಆ ಸನ್ನಿವೇಶದಲ್ಲಿ ಆತನ ಮನಸ್ಸಿನಲ್ಲುಂಟಾಗುವ ಪರಕೀಯ ಪ್ರಜ್ಞೆಯ ಭಾವನೆಗಳು ಇಲ್ಲಿ ತುಂಬಾ ಸೂಕ್ಷ್ಮವಾಗಿ, ಪರಿಣಾಮಕಾರಿಯಾಗಿ ಪಡಿಮೂಡಿವೆ. ಇದು ಒಂದು ಉದಾಹರಣೆಯಷ್ಟೇ. ನಿಸಾರ್ ಅವರ ಕಾವ್ಯದಲ್ಲಿ ಈ ಗುಣ ಸಮೃದ್ಧವಾಗಿದೆ. ಬುದ್ಧಿ ಭಾವಗಳ, ವಾಸ್ತವ, ಕಲ್ಪನೆಗಳ ವಿದ್ಯುದಾಲಿಂಗನವನ್ನು ಕವಿ ಇಲ್ಲಿ ಯಶಸ್ವಿಯಾಗಿ ಸಾಧಿಸಿದ್ದಾರೆ.

ವ್ಯಂಗ್ಯ ವಿಡಂಬನೆಗಳ ಸಮರ್ಥ ಬಳಕೆಯಿಂದ ಉಜ್ವಲ ಕವನಗಳನ್ನು ಸೃಷ್ಟಿಸುವದರಲ್ಲೂ ನಿಸಾರ್ ಅವರು ಬಹಳ ಯಶಸ್ವಿಯಾಗಿದ್ದಾರೆ. ಅವರ 'ಕುರಿಗಳು ಸಾರ್' 'ಖಾಲಿ ಸೈಟುಗಳು' 'ಫುಟ್ ಪಾತುಗಳು' ಸ್ವಜನೋದ್ಧಾರಕರು' ಮುಂತಾದ ಕವನಗಳನ್ನು ಇದಕ್ಕೆ ಉದಾಹರಿಸಬಹುದು.

'ಖಾಲಿ ಸೈಟುಗಳು' ಕವನದ ಈ ಸಾಲುಗಳನ್ನು ನೋಡಿ:

ಮಾಟಾದ ಸಾಧನಗಳ ನೀಟುದಂತಾವಳಿಯ ನಡುವೆ
ಕಣ್ಣಿರಿಯುತ್ತವೆ ಅಲ್ಲೊಂದು ಇಲ್ಲೊಂದು ಹಲ್ಲಿರದ ಸಂದು
ಪಾರ್ಥೇನಿಯಂನ ದಟ್ಟತೋಟಗಳು,
ಬಾಡಿಗೆ ನಿವಾಸಿಗಳ ಕಣ್ಣ ಕಾಲ ಕೂಟಗಳು

ಸೆಟ್ಟರ, ಸೇಟುಗಳ ನರಾಕೃತಿವೆತ್ತ ನೋಟುಗಳು

ಸುಲಭಕಮಾಯಿಯ ಬತ್ತ ದೂಟೆಗಳು

ದಿನೇದಿನೇ ದಿಕ್ಕೇರುವ ರೇಟುಗಳು– ಖಾಲಿ ಸೈಟುಗಳು!

ಇಲ್ಲಿ ಕವಿ ಸಾಧಿಸಿರುವ ವಾಗರ್ಥ ಪ್ರತಿ ಪತ್ತಿಯ ಯಶಸ್ಸು ಸ್ವಯಂವೇದ್ಯ.

ನಿಸಾರರ ಕಾವ್ಯಪ್ರಜ್ಞೆ ಆಳವೆಷ್ಟೋ ಅಷ್ಟೇ ವಿಶಾಲವೂ ಆಗಿದೆ. ಮಹತ್ತು ಬೃಹತ್ತುಗಳನ್ನು ಗಮನಿಸುವಷ್ಟೇ ಸಂವೇದನ ಶೀಲತೆಯಿಂದ ಅವರು ಯಃಕಶ್ಚಿತ್ ವಿದ್ಯಮಾನಗಳಿಗೂ ನವಿಲುಗರಿಯಂತೆ ಪ್ರತಿಸ್ಪಂದಿಸುವ ಸಾಮರ್ಥ್ಯ, ಹೃದಯವಂತಿಕೆಯನ್ನು ತೋರುತ್ತಾರೆ. ಬಸವಣ್ಣ, ಗಾಂಧಿ, ಪರಮಹಂಸ, ಏಸು, ಅರಬಿಂದೊ, ಮಾಸ್ತಿಯವರಂತಹ ಪ್ರಸಿದ್ಧರ ಬಗ್ಗೆ ಕವನಿಸುವಂತೆ ಶ್ರೀರಂಗಪಟ್ಟಣದ ಭಗ್ನಾವಶೇಷದ ಸಮಾಧಿಗಳಲ್ಲಿ ಮಲಗಿರುವ 'ಪರದೇಶದಲ್ಲಿ ಜನಿಸಿ, ಪರಾಧೀನರಾಗಿ, ಪರದೇಶಿಗಳಾಗಿ ಸತ್ತ ಅಜ್ಞಾತ ಅನಾಮಿಕ ಆಂಗ್ಲರ' ಕುರಿತೂ ಗಾಢ ವಿಷಾದದಿಂದ ಬರೆಯುತ್ತಾರೆ. ಅವರೇ ಹೇಳುವಂತೆ 'ಗೋಚರ, ಶ್ರಾವ್ಯ ಮತ್ತು ಸ್ಪರ್ಶ ಜಗತ್ತಿನ ಸಕಲದ್ರವ್ಯಗಳೂ, ವಹಿವಾಟುಗಳೂ, ತಾನು ಉಸಿರಾಡುತ್ತಿರುವ ನೆಲದಿಂದ ಅಲಾಯಿದಗೊಳಿಸಲಾಗದ, ಕಡೆಗಣಿಸಲಾಗದ, ಅಪೂರ್ವ ಅನುಭೂತಿಯ ಬಳುವಳಿಗಳೆಂದೂ, ಸಜೀವ ಸಂತೋಷಗಳೆಂದೂ, ಆಟಿಕೆಗಳ ನಡುವಿನ ಹಸುಳೆಯಂತೆ ಅವುಗಳಲ್ಲಿ ಮಗ್ನನಾಗಿ' ಅವುಗಳನ್ನು ಕಾವ್ಯ ವಿನ್ಯಾಸದಲ್ಲಿ ಸಾಕ್ಷಾತ್ಕರಿಸುವುದು ಅವರ ಸಾಧನೆಯ ವೈಶಿಷ್ಟ್ಯ.

ಎಲ್ಲ ಸಮರ್ಥ ಕವಿಗಳಂತೆ, ನಿಸಾರ್ ಸಹ ಬದುಕಿನ ಅತ್ಯಂತ ಸೂಕ್ಷ್ಮ ನೋಟಗಳನ್ನೂ, ದನಿಗಳನ್ನೂ, ವಾಸನೆಗಳನ್ನೂ, ಕೋಮಲ, ಸಂಕೀರ್ಣ, ನಿಗೂಢ ಅನುಭವಗಳನ್ನೂ ಗ್ರಹಿಸಿ ಅವಕ್ಕೆ ಸೂಕ್ತವಾದ ಭಾಷೆ, ಶಬ್ದ, ಉಪಮೆ, ರೂಪಕ, ಪ್ರತಿಮೆಗಳ ಮುಖಾಂತರ ಧ್ವನಿಸುವಲ್ಲಿ ಸಂವಹನಶೀಲವಾದ ರೂಪ ಕೊಡುತ್ತಾರೆ. ಅವರ ಉಪಮೆ, ರೂಪಕ, ಪ್ರತಿಮೆಗಳಲ್ಲಿ ಕಂಡುಬರುವ ತಾಜಾತನ, ಸ್ವೋಪಜ್ಞತೆ, ವೈವಿಧ್ಯ, ಔಚಿತ್ಯ ಬೆರಗುಗೊಳಿಸುವಂಥದು.

ನಿಸಾರ್ ಅವರು ಉತ್ತಮ ಕವಿಯಷ್ಟೇ ಅಲ್ಲ ಸೊಗಸಾದ ಕಾವ್ಯ ಗಂಧಿಯಾದ ಗದ್ಯ ಲೇಖಕರೂ ಹೌದು. ಅವರ 'ಅಚ್ಚುಮೆಚ್ಚು' 'ಇದು ಬರಿ ಬೆಡಗಲ್ಲೊ ಅಣ್ಣ' ಮುಂತಾದ ಎಂಟು ಗದ್ಯ ಗ್ರಂಥಗಳು ಪ್ರಕಟವಾಗಿವೆ. ತನ್ನದೇ ಆದ ವಿಶಿಷ್ಟ ಕಾವ್ಯ

ಭಾಷೆಯನ್ನೂ ಗದ್ಯ ಭಾಷೆಯನ್ನೂ ರೂಪಿಸಿಕೊಳ್ಳುವುದರಲ್ಲಿ ನಿಸಾರ್ ಅವರ ಸಾಧನೆ ಅನನ್ಯವಾದುದೆಂದು ಹೇಳಬೇಕು. ತಮ್ಮ ಮುಸ್ಲಿಂ ಸಮಾಜದ ಹಿನ್ನಲೆಗೆ ಸಹಜವಾದ (ದೌಲತ್ತು, ಮುಲಾಕಾತು, ಮಜಬೂತು, ಖವಲತ್ತು, ನೌಬತ್ತು, ಬರ್‌ಬಾದು) ಮುಂತಾದ ನೂರಾರು ಉರ್ದು, ಹಿಂದಿ, ಪಾರ್ಸಿ ಪದಗಳನ್ನು ಸೂಕ್ತ ರೀತಿಯಲ್ಲಿ ಬಳಸುವುದರಲ್ಲೂ ಅವರು ಅನನ್ಯರಾಗಿದ್ದಾರೆ. ತನ್ನ ಸಾಂಸ್ಕೃತಿಕ ಹಿನ್ನಲೆಗೆ ಅನ್ಯವಾದ, ಭಿನ್ನವಾದ ಸಂಸ್ಕೃತ ಭಾಷೆಯ ಪದಗಳ ಬಳಕೆಯಲ್ಲಿ ಅವರು ತೋರುವ ನೈಪುಣ್ಯ ಅಚ್ಚರಿ ಹುಟ್ಟಿಸುತ್ತದೆ. ಇದು ತನ್ನ ಸಾಮಾಜಿಕ-ಸಾಂಸ್ಕೃತಿಕ ಹಿನ್ನಲೆಯ - ಮಿತಿಗಳನ್ನು ಮೀರಿ ಸಂಸ್ಕೃತ ಶಬ್ದ ಸಂಪತ್ತನ್ನು ತನ್ನದಾಗಿ ಮಾಡಿಕೊಂಡು, ಅದನ್ನು ತನ್ನ ಅಭಿವ್ಯಕ್ತಿಯ ಅದ್ಭುತ ಸಾಧನವನ್ನಾಗಿ ಮಾಡಿಕೊಂಡ ಮಹಾಕವಿ ಕುವೆಂಪು ಅವರ ಸಾಧನೆಯನ್ನು ನೆನಪಿಸುತ್ತದೆ. ಹೊಸ ತಲೆಮಾರಿನ ಬಹುತೇಕ ಕುವೆಂಪುಭಕ್ತರೂ ಅವರ ಈ ಸಾಧನೆಯನ್ನು ನಿರ್ಲಕ್ಷಿಸಿದ್ದಾರೆ. ಸಂಸ್ಕೃತದ ಬಗ್ಗೆ ತಿರಸ್ಕಾರ ಭಾವನೆ ತಳೆದಿದ್ದಾರೆ. ಆದರೆ ನಿಸಾರ್ ಕುವೆಂಪುರವರಂತೆ ತಮ್ಮ ಹಿನ್ನೆಲೆಯ ಮಿತಿಗಳನ್ನು ಮೀರಿ, ಕನ್ನಡದ ಶಕ್ತಿವಂತಿಕೆಗಾಗಿ ಸಂಸ್ಕೃತ ಪದಗಳನ್ನು ದುಡಿಸಿಕೊಂಡಿರುವುದು ನಿಜವಾಗಿಯೂ ಶ್ಲಾಘನೀಯ. ಕೃತಿ ನಿಷ್ಠ ವಿಮರ್ಶೆಯ ಹೆಸರಿನಲ್ಲಿ ಕವಿಯ ಸಾಂಸ್ಕೃತಿಕ ಹಿನ್ನೆಲೆಯನ್ನು ಸಂಪೂರ್ಣ ಅಲಕ್ಷಿಸುವುದು ಸಾಧ್ಯವಿಲ್ಲ. ಈ ದೃಷ್ಟಿಯಿಂದ ನೋಡಿದರೆ ನಿಸಾರ್ ಅವರ ಸಾಧನೆಗೆ ಮೆಚ್ಚುಗೆ ಸಲ್ಲಲೇ ಬೇಕಾಗುತ್ತದೆ. ಇದು ನಾವು ಅವರಿಗೆ ನೀಡುವ ವಿಶೇಷ ರಿಯಾಯತಿಯೇನಲ್ಲ. ಯಾವುದೇ ರಿಯಾಯಿತಿಯ ಅಗತ್ಯವಿಲ್ಲದೆ, ಅವರು ತಮ್ಮ ಸಾಧನೆ-ಸಿದ್ಧಿಗಳ ಗುಣಮಟ್ಟದಿಂದಲೇ ಕನ್ನಡ ಸಾಹಿತ್ಯ ಲೋಕದಲ್ಲಿ ಒಂದು ಉನ್ನತ ಸ್ಥಾನದಲ್ಲಿ ಸ್ಥಿರವಾಗಿ ನಿಂತಿದ್ದಾರೆ. ಯಾವ ಗುಂಪಿಗೂ ಸೇರದೆ, ಯಾವ ಆಸೆಗೂ ಬಲಿಯಾಗದೆ, ತಮ್ಮದೇ ಆದ ಮಾರ್ಗದಲ್ಲಿ ಎತ್ತರಕ್ಕೇರಿದ್ದಾರೆ.

ಅನುವಾದಕಾರರಾಗಿಯೂ ನಿಸಾರ್ ಅವರ ಸಾಧನೆ ಗಣನೀಯ. ಶೇಕ್ಸ್‌ಪಿಯರ್‌ನ 'ಮಿಡ್ ಸಮ್ಮರ್ ನೈಟ್ಸ್ ಡ್ರೀಮ್', 'ಒಥೆಲೊ', 'ಮ್ಯಾಕ್‌ಬೆತ್' ನಾಟಕಗಳ ಅವರ ಅನುವಾದ ಮಾಸ್ತಿಯಂಥ ದಿಗ್ಗಜರ ಮೆಚ್ಚುಗೆಯನ್ನು ಪಡೆದಿದೆ. ಅವರು ಮಾಡಿರುವ ರಶ್ಯನ್ ಕವನಗಳ ಹಾಗೂ ಸ್ಪಾನಿಶ್ ಕವಿ ಪಾಬ್ಲೊನೆರುಡನ ಕವನಗಳ ಅನುವಾದಗಳು ಯಶಸ್ವಿ ಅನುವಾದಗಳೆಂದು ಪರಿಗಣಿತವಾಗಿವೆ. ಹಾಗೆಯೇ ಮಕ್ಕಳ ಸಾಹಿತ್ಯ ನಿರ್ಮಾಣದಲ್ಲೂ ನಿಸಾರ್ ಗಮನಾರ್ಹ ಸಾಧನೆ ಮಾಡಿದ್ದಾರೆ. ಅವರ 'ಹಕ್ಕಿಗಳು' ಕೃತಿಗೆ ರಾಷ್ಟ್ರೀಯ ಹಾಗೂ ರಾಜ್ಯ ಪ್ರಶಸ್ತಿ ಬಂದಿವೆ.

ನಿಸಾರ್ ಅವರಿಗೆ ಸಂದ ಪ್ರಶಸ್ತಿಗಳ ಪಟ್ಟಿ ತುಂಬ ದೊಡ್ಡದು, ಕೇಂದ್ರ, ರಾಜ್ಯ ಸಾಹಿತ್ಯ ಅಕಾಡೆಮಿಗಳ ಪ್ರಶಸ್ತಿ, ಸೋವಿಯತ್ ಲ್ಯಾಂಡ್ ಪ್ರಶಸ್ತಿ, ಗೊರೂರು ಪ್ರಶಸ್ತಿ, ಆರ್ಯಭಟ ಪ್ರಶಸ್ತಿ, ವಿಶ್ವಮಾನವ ಪ್ರಶಸ್ತಿ, ಅನಕೃ ಪ್ರಶಸ್ತಿ, ಕೆಂಪೇಗೌಡ ಪ್ರಶಸ್ತಿ, ನಾಡೋಜ ಪ್ರಶಸ್ತಿ - ಇವು ಅವುಗಳಲ್ಲಿ ಕೆಲವಷ್ಟೆ. ಮಾಸ್ತಿ, ಪುತಿನ, ಗೋಕಾಕ, ಅಡಿಗರಂಥ ಶ್ರೇಷ್ಠ ಕವಿಗಳ ಮೆಚ್ಚಿಗೆಯನ್ನು ಗಳಿಸಿದ್ದರೂ ನಿಸಾರ್ ಕಾವ್ಯದ ಬಗ್ಗೆ ಸಮಗ್ರ, ಸಮರ್ಥ ಅಧ್ಯಯನ, ವಿಶ್ಲೇಷಣೆ, ವಿಮರ್ಶೆ ಸಾಕಷ್ಟು ಆಗಿಲ್ಲ. ಇತ್ತೀಚೆಗೆ ಆ ಪ್ರಯತ್ನ ಆರಂಭವಾಗಿದೆ ಎಂದು ತಿಳಿದು ಬಂದಿದೆ. ಅದು ಸರ್ವಥಾ ಸ್ವಾಗತಾರ್ಹ. ಮಾಸ್ತಿ ಪ್ರಶಸ್ತಿ ವಿಜೇತರಾಗಿರುವ ಕವಿವರ ನಿಸಾರ್ ಅವರಿಗೆ ಹಾರ್ದಿಕ ಅಭಿನಂದನೆಗಳು. ಅವರು ಇನ್ನೂ ಬಹು ಕಾಲ ನಮ್ಮೊಡನಿದ್ದು ಕನ್ನಡ ಸಾಹಿತ್ಯಕ್ಕೆ ತಮ್ಮ ಕಾಣಿಕೆಗಳನ್ನು ನೀಡುತ್ತಿರಲಿ ಎಂದು ಹಾರೈಸೋಣ.



## 'ಡಿವಿಜಿ ಸಂದೇಶಗಳು ಸಾರ್ವಕಾಲಿಕ'

"ಕನ್ನಡ ಸಾಹಿತ್ಯ ಲೋಕದ ದಿಗ್ಗಜರಲ್ಲೊಬ್ಬರಾದ ಡಿ.ವಿ.ಜಿ ಗದ್ಯ ಪದ್ಯ- ಎರಡರಲ್ಲೂ ಶ್ರೇಷ್ಠ ಕೃತಿಗಳನ್ನು ರಚಿಸಿದ ಧೀಮಂತರು. ಅವರ 'ಬಾಳಿಗೊಂದು ನಂಬಿಕೆ' ಗಾತ್ರದಲ್ಲಿ ಚಿಕ್ಕದಾದರೂ ಸತ್ವದಲ್ಲಿ ದೊಡ್ಡದಾದ ಕೃತಿ. ಜೀವನವನ್ನು ಒಂದು ವರವೆಂದು ತಿಳಿದು ಉತ್ಸಾಹ, ಸಂತೋಷ, ಪೌರುಷ, ಸಂಯಮಗಳಿಂದ ಜೀವಿಸಬೇಕಲ್ಲದೆ, ತಿರಸ್ಕರಿಸಕೂಡದು. ಜೀವನದಲ್ಲಿ ಸಹಜವಾಗಿರುವ ವ್ಯಕ್ತಿ-ಸಮಾಜ, ಧರ್ಮ-ವಿಜ್ಞಾನ, ಪರಂಪರೆ-ಆಧುನಿಕತೆ ಮುಂತಾದ ದ್ವಂದ್ವಗಳಲ್ಲಿ ಸಮನ್ವಯ ಸಾಧಿಸಿ ಬಾಳನ್ನು ಬೆಳಗಿಸಿಕೊಳ್ಳುವ ಸಮಗ್ರತೆಯ ಸೂತ್ರವನ್ನು ಈ ಕೃತಿಯಲ್ಲಿ ಡಿವಿಜಿ ನೀಡಿದ್ದಾರೆ. ಅವರ ಸಂದೇಶ ಸಾರ್ವಕಾಲಿಕವಾದುದು" ಎಂದು ಖ್ಯಾತ ವಿದ್ವಾಂಸ, ವಾಗ್ಮಿ ಪ್ರೊ. ಎಂ.ಸಿ. ಪ್ರಕಾಶ್ ಹೇಳಿದರು.

ರವೀಂದ್ರನಾಥ ಟಾಗೋರ್ ನಗರದ ಶಿವರಾಮಕಾರಂತ ವೇದಿಕೆಯ ಜೂನ್ ತಿಂಗಳ ಕಾರ್ಯಕ್ರಮದಲ್ಲಿ ಅವರು ಮುಖ್ಯ ಅತಿಥಿಯಾಗಿ ಮಾತಾಡುತ್ತಿದ್ದರು. ಸಭೆಯ ಅಧ್ಯಕ್ಷತೆ ವಹಿಸಿದ್ದ ಹಿರಿಯ ಸಾಹಿತಿ ನೀಲತ್ತಹಳ್ಳಿ ಕಸ್ತೂರಿ ಅವರು ಡಿವಿಜಿಯವರ ಬದುಕಿನ ಕೆಲವು ಸ್ವಾರಸ್ಯಕರ ಸಂಗತಿಗಳನ್ನೂ ವಿಚಾರಗಳನ್ನೂ ತಮ್ಮ ಭಾಷಣದಲ್ಲಿ ಹಂಚಿಕೊಂಡರು.

ಆರಂಭದಲ್ಲಿ ವೇದಿಕೆಯ ಕಾರ್ಯದರ್ಶಿ ಪ್ರಾ. ಚಂದ್ರಶೇಖರ ಚಡಗರು ಸ್ವಾಗತಿಸಿದರು. ಬಿ.ವಿ. ಕೆದಿಲಾಯರು ಅತಿಥಿಗಳ ಪರಿಚಯ ಮಾಡಿದರು. ಕೊನೆಯಲ್ಲಿ ಶ್ರೀಮತಿ ರಾಧಾ ರಾಮಸ್ವಾಮಿ ಧನ್ಯವಾದವಿತ್ತರು.

# ಕಂಬಾರರು ಎರಕ ಹೊಯ್ದ ಡಾ। ಅಂಬೇಡಕರರು

- ಬಿ. ಆರ್. ನಾಗೇಶ್

ಒಂದು ಸತ್ವಪೂರ್ಣ ಕವನ ಮೊದಲಾಗಿ ಓದುಗನ ಮನಸ್ಸಿಗೆ ಮುದ ಕೊಡಬೇಕು; ಕ್ರಮೇಣ ಆತನ ಬೌದ್ಧಿಕ ಸ್ತರದಲ್ಲಿ ಧ್ವನಿ ಸಾಧ್ಯತೆಯನ್ನು ಪಡೆದುಕೊಳ್ಳಬೇಕು. ಈ ಬಗೆಯ ಒಂದು ಪುಟ್ಟ ಕವನ ಡಾ। ಚಂದ್ರಶೇಖರ ಕಂಬಾರರ "ಅಂಬೇಡಕರರು ಇವರು" –

ತಮ್ಮ ಹೆಚ್ಚಿನ ಕವನಗಳಲ್ಲಿ ವ್ಯಂಗ್ಯವನ್ನು ಸಶಕ್ತವಾಗಿ ಬಳಸುವ ಕಂಬಾರರು (ವ್ಯಂಗ ವ್ಯಕ್ತಿ ವಿಮರ್ಶೆ-ರಾಮಾಯಣವೂ ಗೋದೂ ಬಾಯಿಯೂ; ಚೀನಿ ಆಕ್ರಮಣದ ಸಮಯ ನಮ್ಮ ದೇಶದ ರಾಜಕೀಯ ಸಾಮಾಜಿಕ ಚಿತ್ರಣದಲ್ಲಿರುವ ವ್ಯಂಗ್ಯ; ಚೀನಾದ ಜನತೆ ಮಾವುತ್ಸೆತುಂಗನ ಆಳ್ವಿಕೆಯಲ್ಲಿ ಪಟ್ಟ ಸುಖ ದುಃಖಗಳ ವ್ಯಂಗ್ಯ ದರ್ಶನ-ಇತ್ಯಾದಿ) ವ್ಯಂಗ್ಯವನ್ನೇ ಕಾವ್ಯವನ್ನಾಗಿಸುವ ಜಾನಪದೀಯ ಸತ್ವವುಳ್ಳ ಕವಿಗಳು. ಅಂಬೇಡಕರರ ಕುರಿತಾಗಿ ಕವನ ಬರೆಯುವಾಗ, ಅದೇ ತುಂಟ ವ್ಯಂಗ್ಯ ಕಾಣಿಸೀತೇ ಎಂಬ ಹೆದರಿಕೆಯಿಂದಲೇ ಈ ಕವನವನ್ನು ಓದಲು ಎತ್ತಿಕೊಂಡೆ. ಆದರೆ ಇಲ್ಲಿ ವ್ಯಂಗ್ಯ ಇದ್ದಿರಲೇ ಇಲ್ಲ. ಒಬ್ಬ ನಿಷ್ಠಾವಂತ ಚರಿತ್ರಾರ್ಹ ವ್ಯಕ್ತಿಯೊಬ್ಬನ ಚಿತ್ರವನ್ನು ಈ ಕವನದಲ್ಲಿ ಯಾವ ವ್ಯಂಗ್ಯವೂ ಇಲ್ಲದೆ ಅವರು ಚಿತ್ರಿಸಿದ್ದು ಸ್ವಲ್ಪ ಅಚ್ಚರಿಯ ವಿಚಾರವೇ. ವ್ಯಂಗ್ಯ ಇಲ್ಲದುದರಿಂದಲೇ ಈ ಕವನದ ಮರು ಓದುವಿಕೆಗಳು ಸಾಧ್ಯವಾದವು.

ತನ್ನಲ್ಲಿರುವ ಜಾನಪದೀಯ ಶಕ್ತಿಯ ಸತ್ವವನ್ನು ತನ್ನ ಹೆಚ್ಚಿನ ಕವನಗಳಲ್ಲಿ ಕಂಬಾರರು ನಿಸ್ಸಂಕೋಚವಾಗಿ ಬಳಸುತ್ತಾರೆ. ಹೀಗೆ ಬಳಸುವುದರಿಂದ ತಾನೊಬ್ಬ ಜಾನಪದ ಕವಿ ಎಂದು ಗುರುತಿಸಲ್ಪಟ್ಟೇನು-ಎಂಬ ಹೆದರಿಕೆ ಅವರಿಗಿಲ್ಲ. ಮುಖ್ಯವಾಗಿ ಈ ಜಾನಪದ ಶಕ್ತಿ ಅವರ ಕವನಗಳಿಗೆ ಬೇರಾವ ಕವಿಗಳಲ್ಲಿಯೂ ಕಾಣಿಸದೆ ಇರುವ ಒಂದು ಮೂಲ ಬಣ್ಣವನ್ನು ಒದಗಿಸುತ್ತದೆ. ಈ ಸಿದ್ಧಾಂತವನ್ನೇ ಎದುರಾಗಿಟ್ಟುಕೊಂಡು ಅವರು ಬರೆದಿರುವ "ಅಂಬೇಡಕರರು ಇವರು" – ಎಂಬ ಕವನದ ವಿವೇಚನೆಯನ್ನು ನಾನು ಈ ಬರಹದಲ್ಲಿ ಮಾಡಲಿದ್ದೇನೆ. ತನ್ನ ಮಗ್ಗುಲಲ್ಲಿಯೇ ಡಾ। ಅಂಬೇಡಕರರ

ಪ್ರತ್ಯಕ್ಷರಂತೆಯೇ ಇದೆ ಎಂದು ನಿಖರವಾಗಿ ತಿಳಿದು ಈ ಕವನವನ್ನು ಬರೆದಂತಿದೆ.

ಅಂಬೇಡಕರರ ಕುರಿತಾಗಿ ಕನ್ನಡದಲ್ಲಿ ಅಸಂಖ್ಯಾತ ಪದ್ಯ-ಗದ್ಯಗಳಿದ್ದರೂ, ನಾನು ಕಂಬಾರರ ಕವನವನ್ನು ಆರಿಸಿಕೊಳ್ಳಲು ಮುಖ್ಯ ಕಾರಣ: ಅವರಲ್ಲಿ ಬರುವ ಸಹಜತೆಯ ಜೊತೆಗಿನ ಸೊಬಗು ಮತ್ತು ಕವನಕ್ಕಿರುವ ಮೂರ್ತಸ್ವರೂಪ.

ಅಂಬೇಡಕರರು ಕಣ್ಮರೆಯಾದ ಹೆಚ್ಚು ಕಡಿಮೆ ಹತ್ತು ವರ್ಷಗಳ ಬಳಿಕೆ ಬರೆದ ಕವನವಿದು. ಪ್ರಸಿದ್ಧರು ಕಣ್ಮರೆಯಾಗಲು ಕಾಯುತ್ತಾ ಕುಳಿತಿರುವ ಕೆಲವರು, ಕಂಬಾರರ ಹತ್ತು ವರ್ಷಗಳ ಕಾಯುವಿಕೆಯು ಹಿಂದಿರುವ ಶ್ರದ್ಧಾ ಸಂಪತ್ತನ್ನು ಗುರುತಿಸಬೇಕಾಗುತ್ತದೆ. ಶೀರ್ಷಿಕೆಯಲ್ಲಿ ಬರುವ 'ಇವರು' ಎಂಬ ಶಬ್ದಧ್ವನಿಪೂರ್ಣವಾಗಿದೆ; ಶೀರ್ಷಿಕೆಯನ್ನು ಗಟ್ಟಿಯಾಗಿ ಓದುವಾಗ 'ಇವರು' ಎಂಬ ಶಬ್ದ ಧ್ವನಿಪೂರ್ಣವಾಗಿದೆ; ಶೀರ್ಷಿಕೆಯನ್ನು ಗಟ್ಟಿಯಾಗಿ ಓದುವಾಗ 'ಇವರು' ಎಂಬ ಶಬ್ದದ ಮೇಲೆ ಹೆಚ್ಚಿನ ಒತ್ತು ಹಾಕಿದರೆ, ಆ ಶಬ್ದದಲ್ಲಿರುವ ಧ್ವನಿಶಕ್ತಿಯ ಅರಿವಾದೀತು. ಇವರಂಥವರು ಬೇರೆ ಇರಲು ಸಾಧ್ಯವೇ ಇಲ್ಲ ಎಂಬ ಅರ್ಥವನ್ನು ಈ ಶಬ್ಧ ಹೊಳೆಯಿಸುತ್ತದೆ. ಡಾ। ಅಂಬೇಡಕರರು ತಮ್ಮ ಮಗ್ಗುಲಲ್ಲೇ ಇದ್ದಾರೆ ಎಂದು ಸೂಚಿಸಲು ಈ ಶಬ್ಧವನ್ನು ಬಳಸಿರಬಹುದು.

ಇದೊಂದು ಪುಟ್ಟ ಕವನ. ನಾಲ್ಕು ನಾಲ್ಕು ಸಾಲುಗಳ ಐದು ಚರಣಗಳುಳ್ಳದ್ದು. ಆದರೆ ಈ ಪುಟ್ಟ ಕವನದಲ್ಲಿ ಅಂಬೇಡಕರರಂಥ ದೈತ್ಯ ಶಕ್ತಿಯನ್ನು ಸೆರೆ ಹಿಡಿದಿವದ್ದು ಒಂದು ಬಗೆಯಾದ ಕವಿತಾ ಸಿದ್ಧಿ ಅನ್ನಬೇಕು. ಡಾ। ಅಂಬೇಡಕರರ ವ್ಯಕ್ತಿತ್ವ ಅಷ್ಟು ಬೃಹತ್ ಆದದ್ದು. ಅವರನ್ನು ಈ ಪುಟ್ಟ ಕವನದಲ್ಲಿ ಸೆರೆ ಹಿಡಿಯಲು ಕವಿಗಳು ಶ್ರಮಿಸಿದ್ದರು ಎನ್ನುವುದಕ್ಕಿಂತ ಹೆಚ್ಚಾಗಿ, ಆ ವ್ಯಕ್ತಿತ್ವದ ಎಲ್ಲಾ ಮಗ್ಗುಲುಗಳನ್ನು ಹೇಗೆ ಸೆರೆ ಹಿಡಿದಿದ್ದಾರೆ - ಎಂದು ಅರ್ಥೈಸುವುದು ಸೂಕ್ತವಾಗಿದೆ.

ತಮ್ಮ ಮನಸ್ಸಿಗೆ ಸಮೀಪವಿರುವ ವಸ್ತುವನ್ನು ಆರಿಸಿಕೊಂಡು ಕವನ ಬರೆಯುವ ವೇಳೆ ಕಂಬಾರರ ಭಾಷೆಯಲ್ಲಿ ಜಾನಪದೀಯ ಸೊಬಗು ಕಾಣಸುತ್ತದೆ. ಈ ಜಾನಪದೀಯ ಸೊಬಗು ಕೆಲವೊಮ್ಮೆ ಅಚ್ಚರಿಯನ್ನು ಮೂಡಿಸೀತು.

ನಮಿಸಿರಿ ಇಗೊ ಅಂಬೇಡಕರರಿವರು
ಶರಣು ಹೇಳಿರಯ್ಯ !
ಬೊಗಸೆತುಂಬ ಮೀಸಲದ ಭಕ್ತಿಯಲಿ
ಇವರ ನೆನೆಯಿರಯ್ಯ ॥

ಇಲ್ಲಿ ಈ ಕವನದ ಮೊದ ಚರಣದಲ್ಲಿ ಬರುವ ಶಬ್ದ ಪುಂಜ ಒಂದು ರೀತಿಯ ಸತ್ವವನ್ನು ಒಳಗೊಂಡಿದೆಯಾದರೂ, ವ್ಯಂಗ್ಯವನ್ನು ಸೃಷ್ಟಿಸುವುದಿಲ್ಲ. ಬದಲಾಗಿ ಆತ್ಮೀಯತೆಯನ್ನು ಸೃಷ್ಟಿಸುತ್ತದೆ. ಈ ಕವನದ ಎರಡನೆಯ ಸಾಲಿನಲ್ಲಿರುವ ''ಶರಣು ಹೇಳಿರಯ್ಯಾ'' – ಎಂಬ ಶಬ್ಧ ಪುರಾಣಜನ್ಯ ಜಾನಪದ ಸತ್ವವನ್ನು ಒಳಗೊಂಡಿರುತ್ತದೆ. ಕಂಬಾರರು ಎಲ್ಲೆಲ್ಲಿ ಶ್ರದ್ಧಾಭಕ್ತಿಗಳಿಂದ ಒಂದು ವ್ಯಕ್ತಿಯನ್ನು ಸಂಬೋಧಿಸುತ್ತಾರೆಯೋ, ಅಲ್ಲೆಲ್ಲಾ ಶರಣು' ಎಂಬ ಶಬ್ದವನ್ನು ಬಳಸಿಯೇ ಬಳಸುತ್ತಾರೆ.

ಈ ಕವನದ ಇನ್ನೊಂದು ವೈಶಿಷ್ಟ್ಯವೇನೆಂದರೆ, ಮೊದಲ ಚರಣದಲ್ಲಿ ಮಾತ್ರ ಕಾಣಿಸುವ ಜಾನಪದೀಯ ಶಬ್ದ ಸಂಕುಲ. ಈ ಜಾನಪದೀಯ ಅಂಶ ಮುಂದಿನ ಚರಣಗಳಲ್ಲಿ ಕಾಣಿಸದೆ ಇದ್ದೂ, ಅವುಗಳೆಲ್ಲಾ ಶಿಷ್ಟ ಭಾಷೆಯಲ್ಲಿಯೇ ಇವೆ. (ಯಾವುದೇ ಸಂಸ್ಕಾರವಿಲ್ಲದ ಕುಟುಂಬ ಒಂದರಲ್ಲಿ ಜನಿಸಿ, ದೇಶದ ಮೇರು ವ್ಯಕ್ತಿತ್ವವಾಗಿ ಬೆಳೆದಿದ್ದ ಅಂಬೇಡಕರರ ವ್ಯಕ್ತಿತ್ವ ಚಿತ್ರಣ – ಅವರ ಬದುಕಿನಂತೆಯೇ ಇಲ್ಲಿ ರೂಪಗೊಂಡಿರುವುದನ್ನು ಕಾಣಬಹುದು).

ಈ ಮೊದಲ ಚರಣದಲ್ಲಿರುವ 'ಅಂಬೇಡಕರರಿಗೆ ನಮಿಸಿ' – ಎಂಬ ಶಬ್ದಗಳಲ್ಲಿ ತಾನಾಗಿ ಅವರಿಗೆ ನಮಿಸುತ್ತೇನೆ ಎಂದೂ, ಓದುಗರು ಕೂಡಾ ಅವರನ್ನು ನಮಿಸಬೇಕೆಂದೂ ಸೂಚಿಸುತ್ತಾರೆ. ಮೂರನೆಯ ಸಾಲಿನಲ್ಲಿ ಬರುವ 'ಬೊಗಸೆ ತುಂಬ ಮೀಸಲಾದ ಭಕ್ತಿಯಲಿ' – ಎಂಬ ಶಬ್ದ ಪುಂಜದಲ್ಲಿ ಅವರನ್ನು ಹೇಗೆ ಪೂಜಿಸಬೇಕು, ಅದಕ್ಕಾಗಿ ಯಾವ ದೃಷ್ಟಿಯನ್ನು ಬೊಗಸೆ ತುಂಬಾ ಹಿಡಿದುಕೊಂಡಿರಬೇಕು – ಎಂದು ಸೂಚ್ಯವಾಗಿ ಹೇಳುತ್ತಾ , ದಲಿತರು ತಮಗೆ ದೊರೆತ ಮೀಸಲಾತಿ ಸೌಲಭ್ಯವನ್ನು ಬೊಗಸೆ ತುಂಬಾ ತುಂಬಿಕೊಂಡು ಅವರಿಗೆ ಸಮರ್ಪಿಸಬೇಕು – ಎನ್ನುತ್ತಾರೆ. ದಲಿತರು ಇಂದು ಪಡೆಯುವ ಎಲ್ಲಾ ಸೌಲಭ್ಯಗಳ ಮೂಲ ಪುರುಷ ಅವರು ತಾನೆ ? ಅವರಿಂದ ದೊರೆತ

ಸೌಲಭ್ಯಗಳಿಂದಲೇ ಅವರನ್ನು ಪೂಜಿಸಬೇಕು ಎಂಬ ಮಾತು - ಕೃತಜ್ಞತೆಯ ಭಾವದಿಂದ ತುಂಬಿ ತುಳುಕುತ್ತಿದೆ.

ಹುಲ್ಲಿನ ಗಾಯವ ಮಾಯಿಸಿ ನಿಲ್ಲುವ
ಪೊಗರನು ಕೊಟ್ಟವರು.
ಹೊಲಸು ಗಲೀಜಲಿ ಕಮಲ ಹುಟ್ಟುವ
ಪವಾಡ ತೋರಿದವರು.

ಈ ಎರಡನೆಯ ಚರಣದ ಮೊದಲೆರೆಡು ಸಾಲುಗಳು ಅವರ ಬಾಲ್ಯಾವಸ್ಥೆಯಲ್ಲಿ ಘಟಿಸಿದ ಕಹಿ ಅನುಭವವಾಗಿರಬೇಕು. ಆ ಬಗೆಯ ಅವಮಾನಿತ ಸಂದರ್ಭದಿಂದ ಹಿಂಜರಿಯಲಿಲ್ಲ. ಬದಲಾಗಿ ಅಲ್ಲಿಯೂ ಒಂದು ಪುಟ್ಟ ಕ್ರಾಂತಿಯನ್ನು ಸೃಷ್ಟಿಸಿದರು. ಹದಿನಾಲ್ಕು ಮಕ್ಕಳ ದಲಿತ ಸಂಸಾರದಲ್ಲಿ ಒಬ್ಬರಾಗಿ ಹುಟ್ಟಿ ಹೊಟ್ಟೆಬಟ್ಟೆಗೆ ಸಾಕಷ್ಟು ಇಲ್ಲದೆ ಬದುಕು, ವಿದ್ಯಾಭ್ಯಾಸವನ್ನು ಕಷ್ಟಪಟ್ಟು ಪಡೆದು, ಎಂಥಾ ನಿರ್ದಯ ವಾತಾವರಣದಲ್ಲಿಯೂ ಹೂವಾಗಿ ಅರಳಬಲ್ಲ ಅದ್ಭುತವನ್ನು ಸಾಧಿಸುತ್ತಾರೆ. ಬಡತನದಿಂದಲೇ ಮೇಲಕ್ಕೆದ್ದ ಇಂಗ್ಲೆಂಡ್ ಅಮೇರಿಕಾಗಳಲ್ಲಿ ವಿದ್ಯಾಭ್ಯಾಸ ಪಡೆದ ಅವರ ಜೀವನ ಒಂದು ಪವಾಡವಾಯಿತು ಎಂದು ಕಂಬಾರರು ಸೂಚಿಸುತ್ತಾರೆ. ಪವಾಡಗಳನ್ನು ಸ್ವಾಮಿಗಳು, ಮಠಾದೀಶರು ಮಾಡುವುದರಲ್ಲಿ ಸಾಮಾಜಿಕ ನ್ಯಾಯ ಇರುವುದಿಲ್ಲ. ಕಳೆದ ಶತಮಾನದ ಉತ್ತರಾರ್ಧದ ಬಳಿಕ ಪವಾಡ' ಎಂಬ ಶಬ್ದ ತನ್ನ ಅರ್ಥ ಗಾಂಭೀರ್ಯವನ್ನು ಕಳೆದುಕೊಂಡಿದೆ. ಹಾಗಾಗಿ ಈ ಕವನದಲ್ಲಿ ಆ ಶಬ್ದ ಬಹು ದುರ್ಬಲವಾಗಿ ಕಾಣಿಸಿಕೊಳ್ಳುತ್ತದೆ. ಈ ಬಗೆಯಾಗಿ ಶಬ್ದಾರ್ಥವನ್ನು ಕಳೆದುಕೊಂಡಿರುವ ಶಬ್ದವನ್ನು ಬಳಸುವುದು ವ್ಯಂಗ್ಯಕ್ಕೆ ಎಡೆ ಮಾಡಿಕೊಟ್ಟೀತೇ - ಎಂಬ ಸಂಶಯವೂ ಬರಬಹುದು. (ಆದರೆ ಈ ಕವನವನ್ನು ಕಂಬಾರರು 1991ರಲ್ಲಿ ಬರೆದದ್ದು; ಆಗ ಪವಾಡ ಶಬ್ದಕ್ಕೆ ವ್ಯಂಗ್ಯಾರ್ಥ ಬಂದಿರಲಿಲ್ಲ - ಎಂಬುದು ಗಮನಿಸಬೇಕಾದ ವಿಚಾರ.) ಸ್ವಶಕ್ತಿಯಿಂದ ಮೇಲೇರುವುದನ್ನೇ 'ಪವಾಡ' ಎಂದು ಕಂಬಾರರು ಗುರುತಿಸುತ್ತಾರೆ. ಈ ಶಬ್ದದ ಬಳಕೆಯು ಹಿಂದುಗಡೆ ವ್ಯಂಗ್ಯ ಇದ್ದಂತೆ ಕಾಣಿಸುವುದಿಲ್ಲ; ಬದಲಾಗಿ ಅಂಬೇಡಕರರ ಪ್ರತಿಭೆಯನ್ನು ಅದು ಪ್ರತಿಬಿಂಬಿಸುತ್ತದೆ - ಎಂದು ತಿಳಿಯಬೇಕು.

ಮುಚ್ಚುಮರೆಗಳನು ಬಿಚ್ಚಿ ಚರಿತ್ರೆಯ
ಕುಹಕ ತೋರಿದವರು.
ಕತ್ತಲನ್ನ ಹುರಿಮಾಡಿ ಹಿಂಡಿ
ಬೆಳ್ದಿಂಗಳ ತೆಗೆದವರು

ದಲಿತರು ಸಮಾಜದಲ್ಲಿ ಹೇಗೆ ಸೃಷ್ಟಿಯಾದರು ಎಂಬುದನ್ನು ತನ್ನ ಅದ್ಭುತ ಬರವಣಿಗೆ 'The Untouchable' ನಲ್ಲಿ ತಾರ್ಕಿಕವಾಗಿ, ಪುರಾವೆಗಳೊಡನೆ ಸಿದ್ದಪಡಿಸಿದವರು ಅಂಬೇಡಕರರು. ದಲಿತರು ಆ ಬಗೆಯ ಹೀನಾವಸ್ಥೆಗೆ ಹೇಗೆ ತಳ್ಳಲ್ಪಟ್ಟರು ಎಂಬುದನ್ನು ಚಾರಿತ್ರಿಕ ಪುರಾವೆಗಳಿಂದ ತೋರಿಸಿದವರು ಅವರು. ದಲಿತರು ಆ ಸ್ಥಿತಿಗೆ ಬರಲು ಇದ್ದ ಕಾರಣಗಳನ್ನೆಲ್ಲಾ 'ಕುಹಕ' ಎಂದು ವರ್ಣಿಸುತ್ತಾರೆ ಕಂಬಾರರು, ಮೂರನೇಯ ಚರಣದಲ್ಲಿ. ಆ ಚರಣದ ಮೂರು ಮತ್ತು ನಾಲ್ಕನೆಯ ಸಾಲುಗಳು ಒಂದು ವಿಸ್ಮಯಕಾರಿ ರೂಪಕವನ್ನು ನಮ್ಮೆದುರಿಗೆ ತೆರೆದಿಡುತ್ತದೆ. " ಕತ್ತಲನ್ನೆಹುಡಿ ಮಾಡಿ ಹಿಂಡಿ, ಬೆಳ್ದಿಂಗಳ ತೆಗೆದವರು" - ಎಂಬೆರಡು ಸಾಲುಗಳಲ್ಲಿ ವ್ಯಕ್ತವಾಗಿರುವ ಅರ್ಥವ್ಯಾಪ್ತಿ, ಕನ್ನಡದ ಉಳಿದ ಹಲವಾರು ಕವಿಗಳನ್ನು ನಿಬ್ಬೆರಗಾಗಿಸಬಹುದು. ಕತ್ತಲಲ್ಲಿ ಮುಳುಗಿರುವ ದಲಿತರ ಸ್ಥಿತಿಯನ್ನು ತಾರ್ಕಿಕವಾಗಿ ಹೀನಾಯಿಸಿ, ದಲಿತರು ಉಳಿದವರಿಗಿಂತ ಕೀಳಲ್ಲ ಎಂದು ಸೂಚಿಸುವ ಅವರ ಭಾವನೆಯಲ್ಲಿ, ಅಂಬೇಡಕರರ ವಿಚಾರವಾಗಿ ಕಂಬಾರರಲ್ಲಿ ಬರುವ ಭಕ್ತಿ ಭಾವ ಸಂಪೂರ್ಣವಾಗಿ ಬಿಚ್ಚಿಕೊಳ್ಳುತ್ತದೆ.

ಹೂವಿನ ಹಾಗೆಯೆ ಬೇರಿಗು ಬೇರೆಯ
ನಿಜವಿದೆಯೆಂದವರು
ರಸಸಿದ್ಧಿಯ ನಾಗಾರ್ಜುನ ಮರೆತಾ
ಬೇರನು ಕಂಡವರು.

ಕವನದ ಈ ನಾಲ್ಕನೆಯ ಚರಣ ಕಾವ್ಯದ ನಾಯಕ ಎಂದರೂ ಸಲ್ಲೀತು. ಸಮಾಜದ ಮೇಲ್ತರಗತಿಯಲ್ಲಿದ್ದು ಹೂವಿನಂತೆ ಮೆರೆಯುವವರಿಗೆ ಇರುವ ನಿಜತ್ವ, ಕೆಳಸ್ತರದಲ್ಲಿ ಬೇರಿನಂತಿರುವವರಿಗೂ ಸಲ್ಲಬೇಕು - ಎಂದು ಸೂಚಿಸುತ್ತಾ,

ಮೇಲ್ತರಗತಿಯಲ್ಲಿ ಇದ್ದವರು ಅಲ್ಲಿಗೆ ತಲುಪಲು ಕೆಳಸ್ತರದಲ್ಲಿರುವ ಬೇರುಗಳೇ ಕಾರಣ - ಎಂದು ಪರೋಕ್ಷವಾಗಿ ಸೂಚಿಸುತ್ತಾರೆ. ಬೇರಿಲ್ಲದೆ ಮರ ಬೆಳೆಯದು ತಾನೆ? ಮರ ಬೆಳೆಯದೆ ಹೂ ಬಿಡದು ತಾನೆ ? ಹಾಗೆ ಅರಳಿದ ಎಲ್ಲಾ ಹೂಗಳು ಬೇರಿಗೆ ಋಣಿಯಾಗಿಯೇ ಇರಬೇಕು - ಸಮಾಜದ ಮೇಲ್ವರ್ಗದಲ್ಲಿರುವವರು ಎಲ್ಲರೂ, ಕೆಳವರ್ಗದಲ್ಲಿರುವ ದಲಿತರಿಗೆ ಋಣಿಗಳಾಗಿರಬೇಕು - ಎಂಬ ಸ್ಪಷ್ಟೋಕ್ತಿಯಿಂದ ದಲಿತರ ಅಂತಃಶಕ್ತಿಯನ್ನು ಇಲ್ಲಿ ಕಂಬಾರರು ಚಿತ್ರಿಸುತ್ತಾರೆ. ಚಾರಿತ್ರಿಕ ಕಾಲದಲ್ಲಿದ್ದ ನಾಗಾರ್ಜುನ ಎಂಬಾತ, ಕೀಳು ಲೋಹಗಳನ್ನೆಲ್ಲಾ ಚಿನ್ನವಾಗಿ ಪರಿವರ್ತಿಸಬಲ್ಲ ಒಂದು ರಸವನ್ನು ಕಂಡು ಹಿಡಿಯಬೇಕೆಂದು. ಪ್ರಯತ್ನಿಸಿ, ಕೊನೆಗೆ ತನ್ನ ರಸಸಿದ್ಧಿಗಾಗಿ ಬೇಕಾಗುವ ಒಂದೇ ಒಂದು ವನಸ್ಪತಿ ಸಿಗದೆ ಸೋಲನ್ನು ಅನುಭವಿಸುತ್ತಾನೆ. ನಾಗಾರ್ಜುನನ ಈ ಸೋಲನ್ನು, ಅಂದರೆ ಕೀಳು ಲೋಹಗಳನ್ನು ಚಿನ್ನವನ್ನಾಗಿಸುವ ರಸವನ್ನು ಅಂಬೇಡಕರರು ದಲಿತರ ಬದುಕನ್ನು ಬಂಗಾರವನ್ನಾಗಿ ಮಾಡಬಲ್ಲ ರಸಸಿದ್ಧಿಯನ್ನೂ ಹುಡುಕಿಕೊಟ್ಟರು. ಎಂಥಾ ಅದ್ಭುತ ಕಲ್ಪನೆ ಇದು ; ಅದೂ ಇಷ್ಟೊಂದು ಚಿಕ್ಕ ಕವನದಲ್ಲಿ! ನಾಗಾರ್ಜುನ ಚರಿತ್ರೆಯಲ್ಲಿ ಬರುವಾತ. ಆತ ತನ್ನ ಪ್ರಯತ್ನದಲ್ಲಿ ಎಲ್ಲಿ ಸೋತಿರುವನೋ, ಅಲ್ಲಿ ಡಾ। ಅಂಬೇಡಕರರು ಗೆದ್ದಿರುತ್ತಾರೆ - ಎಂಬುದನ್ನು ಎಷ್ಟು ಸೊಗಸಾಗಿ ಕಂಬಾರರು ತನ್ನ ಕವಿತೆಯಲ್ಲಿ ಹಿಡಿದಿಟ್ಟಿರುತ್ತಾರೆ ! ದಲಿತರ ಬದುಕನ್ನು ಅವರು ಹೇಗೆ ಬಂಗಾರವನ್ನಾಗಿಸಿದರು - ಎಂದು ಸೂಚಿಸುತ್ತಾ, ಚಾರಿತ್ರಿಕವಾಗಿ ಸಾಧ್ಯವಾಗದ್ದನ್ನು, ಇಪ್ಪತ್ತನೆಯ ಶತಮಾನದಲ್ಲಿ ಡಾ। ಅಂಬೇಡಕರರು ಹೇಗೆ ಸಾಧಿಸಿದರು - ಎಂಬುದನ್ನು ತೋರಿದ ಕಂಬಾರರ ಕವಿ ಚಾಕಚಕ್ಯತೆಯನ್ನು ಮೆಚ್ಚಲೇಬೇಕು. (ನಾಗಾರ್ಜುನ ರಸಸಿದ್ಧಿಯನ್ನು ಹೊಂದದಿರಲು ಕಾರಣ, ಆತನಿಗೆ ಬೇಕಾದ ಒಂದು ವನಸ್ಪತಿ ಸಿಗದೇ ಇದ್ದುದು. ನಾಗಾರ್ಜುನನ ಈ ಸೋಲನ್ನು ಕಂಬಾರರು 'ಮರೆತ' ಎಂಬ ಶಬ್ದದ ಮೂಲಕ ತಿಳಿಸುತ್ತಾರೆ. 'ಮರೆತ' ಎಂಬ ಶಬ್ದ 'ಸಿಗಲಾರದದ್ದು' - ಎಂಬ ಅರ್ಥವನ್ನು ಕೊಡಲಾರದಷ್ಟೆ! ಅದರೆ ಕವಿಯೊಬ್ಬ ಬಳಸುವ ಶಬ್ದವನ್ನು ಓದುಗರು ಹಿಂಜಬಾರದು.)

ನರರು ಮಾನವರ ಮಧ್ಯೆ ಇದ್ದ
ಅಂತರಗಳ ಬೆಸೆದವರು.
ಕಸಿದ ಕನಸುಗಳ ತಿರುಗಿ ಕೊಟ್ಟು

ಇತಿಹಾಸ ಹಂಚಿದವರು.

ಕವಿತೆಯ ಈ ಕೊನೆಯ ಚರಣ ಅತಿ ಶಿಷ್ಟ ಭಾಷೆಯಲ್ಲಿದೆ. ನರರು ಎಂದರೆ ಸಮಾಜದ ಉನ್ನತ ಸ್ಥಾನದಲ್ಲಿ ಬರುವವರು ಎಂದು ಅರ್ಥೈಸಬಹುದು. (ನರ ಎಂಬ ಪರ್ಣಕುಟೀರವಾಸಿ, ಪೌರಾಣಿಕ ಕಾಲದವ, ದೈವಿಕ ಶಕ್ತಿ ಹೊಂದಿದ್ದ - ಎಂಬ ಮಾತೊಂದಿದೆ). ಹೀಗಾಗಿ ಇಲ್ಲಿ ಕಂಬಾರರು ಬಳಸಿದ 'ನರರು' ಎಂಬ ಶಬ್ದ ಸಮಾಜದ ಮೇಲ್ತರಗತಿಯಲ್ಲಿದ್ದವರು ಮತ್ತು ಈ ಶಬ್ದಕ್ಕೆ ಒತ್ತಾಗಿ ಬರುವ ಮಾನವರು' ಎಂಬ ಶಬ್ದ ಈ ಸಮಾಜದ ಕೆಳವರ್ಗದಲ್ಲಿ ಇದ್ದವರು - ಎಂದು ತಿಳಿಯಬಹುದು. ಈ ಎರಡು ವರ್ಗಗಳ ಜನರ ಮಧ್ಯೆ ಇರುವ ಅಂತರವನ್ನು ಬೆಸೆದವರು ಅಂಬೇಡಕರರು.

ಎರಡು ಪಂಗಡಗಳೊಳಗಿರುವ ಅಂತರವನ್ನು ಅವರು 'ಬೆಸೆಯುತ್ತಾರೆ', ಅಂತರವನ್ನು ಅಂಟಿಸುವುದಿಲ್ಲ. ಬೆಸೆಯುವ ಕ್ರಿಯೆ ಒಂದಾಗುವಿಕೆ ಎಂಬ ಒಳ ಅರ್ಥವನ್ನು ಹೊಂದಿರುತ್ತದೆ.

"ನರರು ಮಾನವರ ಮಧ್ಯೆ ಇದ್ದ ಅಂತರಗಳ ಬೆಸೆದವರು" ಸಾಲುಗಳಾದ ಮೇಲೆ ಕಾಣಿಸಿಕೊಳ್ಳುವ ಕವನದ ಕೊನೆಯ ಎರಡು ಸಾಲುಗಳು ಡಾ। ಅಂಬೇಡಕರರು ಸಾಧಿಸಿದ ಒಂದು ಚಾರಿತ್ರಿಕ ಘಟನೆಯನ್ನು ಸೆರೆಹಿಡಿಯುತ್ತದೆ.

ಬ್ರಿಟಿಷರು ನಮ್ಮನ್ನೂ ಆಳಿದರು, ಬಳಿಕ ನಮಗೆ ಸ್ವಾತಂತ್ರ್ಯ ಕೊಟ್ಟರು. ಅವರು ಸ್ವಾತಂತ್ರ್ಯ ಕೊಟ್ಟೊಡನೆಯೇ ನಮ್ಮ ಕನಸುಗಳು ನಮಗೆ ಹಿಂತಿರುಗಿದವು. ಆ ಕನಸುಗಳಲ್ಲಿ ಭವಿಷ್ಯದ ಭವ್ಯಭಾರತಕ್ಕೆ ಅಡಿಗಲ್ಲಾಗಿ ಇಡಬಲ್ಲ ಸಂವಿಧಾನ ರಚನೆಯೂ ಒಂದಾಗಿತ್ತು. ಈ ಬಗೆಯಾದ ಭವ್ಯಭಾರತದ ಕನಸನ್ನು ರೂಪುಗೊಳಿಸುವುದರಲ್ಲಿ ಅಂಬೇಡಕರರ ಪಾತ್ರ ಮಹತ್ವದಾಗಿತ್ತು. (ಅವರು ಸಂವಿದಾನ ರಚನಾ ಸಮಿತಿಯ ಅಧ್ಯಕ್ಷರಾಗಿದ್ದರು). ಹೀಗೆ ಭವಿಷ್ಯದ ಭಾರತಕ್ಕೆ ಒಂದು ಕಾರ್ಯರೂಪಿ ಸಂವಿಧಾನವನ್ನು ಒದಗಿಸಿದವರಲ್ಲಿ ಅಂಬೇಡಕರರು ಮುಖ್ಯರು. ಸಂವಿಧಾನ ರಚನೆ, ಅದರ ಅನುಷ್ಠಾನ ಎಲ್ಲವೂ ಕಂಬಾರರು ಈ ಕವನವನ್ನು ಬರೆದಾಗ ನುಚ್ಚುನೂರಾಗಿತ್ತು. ಆದರೂ ದೇಶದ ಭವ್ಯ ಭವಿಷ್ಯದ ಕಡೆಗೆ ಕಣ್ಣಿಟ್ಟು, ಸಂವಿಧಾನ ರಚಿಸಿ, ಅದನ್ನು ಓದು ಬರಹಬಲ್ಲ ಭಾರತೀಯರೆಲ್ಲರಲ್ಲಿಯೂ ಹಂಚಿದರು ಅವರು. ಹೀಗೆ ಅವರು 'ಕನಸನ್ನು

ಹಂಚಿದವರು" ( ಈ ಕನಸು ಈಗ ಬಹು ಕೆಟ್ಟ ಅರ್ಥವನ್ನು ಕೊಡುತ್ತಿದೆ; ಸುಖಮಯ, ಸಮೃದ್ಧಿಯ ಭಾರತದ ಬದಲು, ಸ್ವಾರ್ಥಿಗಳು ಆಳುವ ನಾಡಾಗಿದೆ. 1991ರಲ್ಲಿ ದೇಶದ ರಾಜಕೀಯ ಸ್ಥಿತಿ ಅಷ್ಟೊಂದು ಕೆಟ್ಟಿರಲಿಲ್ಲ - ಆದುದರಿಂದ ಕಂಬಾರರು ಅಂಬೇಡಕರರ ಸೇವೆಯನ್ನು ನೆನೆಸಿಕೊಂಡು "ಕನಸನ್ನು ಹಂಚಿದವರು" - ಎಂದು ಬರೆದಿರಬೇಕು.)

ಈ ಕವನ ಬಹಳ ಚಿಕ್ಕದು. ಆದರೆ ಅದರಲ್ಲಿ ಅಡಗಿರುವ ಅರ್ಥವ್ಯಾಪ್ತಿ ಓದುಗರನ್ನು ಬೆರಗುಗೊಳಿಸುತ್ತದೆ. ಕನ್ನಡದಲ್ಲಿ ಅಂಬೇಡಕರರ ಕುರಿತಾಗಿ ಹಲವಾರು ಕವನಗಳು ಬಂದಿರಬಹುದು. ಆದರೆ ಯಾವ ಕವನವೂ ಕಂಬಾರರ ಈ ಕವನದಂತೆ ಹೊಳೆಯುವುದಿಲ್ಲ; ಓದುಗನ ಮನಸ್ಸನ್ನು ಹೊಳೆಯಿಸುವುದಿಲ್ಲ.



ಆಸೆ ದುಃಖಕ್ಕೆ ಮೂಲ, ನಿಜವೇ. ಹಿರಿಯರ ಅನುಭವ-ಪರೀಕ್ಷಿತ ಭಾಷಿತ. ಆಸೆ ಅನರ್ಥಕ್ಕೆ ಆಹ್ವಾನ ಪತ್ರ. ಅನಾಹುತಗಳಿಗೆ ಅಹವಾಲು. ಆದರೆ ಯಾವಾಗ ? ಆಸೆ ಔಚಿತ್ಯದ ಲಕ್ಷ್ಮಣಗೆರೆ ಹಾಯ್ದಾಗ; ಅರಾಜಕ, ಅನಂಕುಶವಾದಾಗ. ಆಗ ಗತಿಗೇಡು ಕಟ್ಟಿಟ್ಟ ಬುತ್ತಿ. ಆದರೆ ಆಸೆಯಿಲ್ಲದ ಮನುಷ್ಯ ಅರೆಚಣವಾದರೂ ಉಸಿರಾಡಲು ಶಕ್ಯವೇ ? ಕೊನೆಗಾಲದ ತನಕ ಜೀವಿತದ ಆಸಕ್ತಿ, ಪ್ರೀತಿಗಳಿಗೆ ಆಸೆಯೇ ಆಮ್ಲಜನಕ. ಬಾಳ್ವೆಯ ಹಸುಳೆಗೆ ಆಸೆಯೇ ಎದೆಹಾಲು. ಕಣ್ಣಿಗೆ ರೆಪ್ಪೆ. ನದಿಗೆ ನೆರೆ. ಕಡಲಿಗೆ ತೆರೆ ಹೇಗೊ ಹಾಗೆ ಆಸೆ ಜೀವನಕ್ಕೆ.

★★★★

ಕನಿಷ್ಠವಾದದ್ದನ್ನು, ಕೆಡುಕಿಗೆ ಕಾರಣವಾದದ್ದನ್ನು, ಕಗ್ಗತ್ತಲೆಯನ್ನು ಪರಿಹರಿಸಿಕೊಳ್ಳುವ ಸಲುವಾಗಿ ಅವುಗಳ ನಿರ್ಮೂಲನಕ್ಕೆ ಶ್ರಮಪಡುವುದರ ಬದಲು, ಅವುಗಳೆದುರು ಉತ್ತಮವಾದದ್ದನ್ನು, ಒಳಿತಾದದ್ದನ್ನು, ಪ್ರಕಾಶವನ್ನು ಪ್ರೋತ್ಸಾಹಿಸುವುದು ಹೆಚ್ಚು ಸುಲಭ ಹಾಗೂ ಮುಕ್ತವೆನ್ನಿಸೀತು.

- ಕೆ. ಎಸ್. ನಿಸಾರ್ ಅಹಮದ್

# ಕುರಿಗಳು ಸಾರ್

- ಆರ್. ಆರ್. ಪಾಂಗಾಳ

ಎಂಬತ್ತೈದರ ಹಳೇ ಮಾಡಲ್ ರೆಡ್ ಮಾರುತಿಯಲ್ಲಿ ಕುಳಿತು ನನ್ನ ಕ್ಲಿನಿಕ್‌ನತ್ತ ಡ್ರೈವ್ ಮಾಡಿಕೊಂಡು ಹೋಗುವಾಗ ಮುಂದಿನಿಂದ ಬಂದ ಹೊಸ ಬಿಳಿಯ ಎಸ್ಟೀಮ್ ಕಾರಿನಲ್ಲಿ ನನ್ನತ್ತ ಯಾರೋ ಕೈ ಬೀಸಿ ವೇವ್ ಮಾಡಿದಂತಾಯಿತು. ಎಲ್ಲೋ ಈ ಹಿಂದೆ ಕಂಡ ಮುಖ. ಜ್ಞಾಪಕ ಬರುತ್ತಿಲ್ಲ. ನನ್ನ ಮಸ್ತಿನಲ್ಲೆಲ್ಲಾ ಈ ಬೆಳಗ್ಗೆ ಯಾರೋ ಅಂದ 'ನಿಮ್ಮ ಸಂಸ್ಕೃತ ಜ್ಞಾನ ಹೇಗಿದೆ?' ಅಂದ ಮಾತು. ನನ್ನ ಯಾವುದೋ ಒಂದು ಕಥೆಯಲ್ಲಿ ಬರುವ 'ಕೌಸಲ್ಯಜಾ...... ಉಷ್ಠ' ''ಅಲ್ಲಿ ಬರುವ ಪಾತ್ರಕ್ಕೆ ಸರಿಯಾಗಿ ಸಂಸ್ಕೃತ ಬರದಿರುವ ಕಾರಣ 'ಕೌಸಲ್ಯಾ ಸುಪ್ರಜಾ' ಹೋಗಿ 'ಕೌಸಲ್ಯಜಾ' ಆಯಿತು ಎಂದು ವಿವರಿಸಿದರೂ ; ಅವರು ನಕ್ಕ ಮುಸುಕು ನಗು ನನ್ನನ್ನು ಅಣಕಿಸುತ್ತಲೇ ಇದೆ. ಕೆಲವೊಮ್ಮೆ ನಮ್ಮ ವೈಫಲ್ಯವನ್ನು ಮುಚ್ಚಿಡಲು ಸಮರ್ಥನೆಯ ಸೋಗು ಬೇಕಾಗುತ್ತದೆ. ಇನ್ನು ಕೆಲವೊಮ್ಮೆ ಸತ್ಯವನ್ನು ತೆರೆದಿಡಲು ನಡೆಸುವ ಪ್ರಯತ್ನಗಳೂ ಸೋಗಿನಂತೆ ಕಂಡು ಬರುತ್ತವೆ.

ಅವರು ಹೇಳಿದ ಇನ್ನೊಂದು ಮಾತು ಜ್ಞಾಪಕಕ್ಕೆ ಬರುತ್ತದೆ, ''ನೀವು ಪರವಾಗಿಲ್ಲ ಡಾಕ್ಟ್ರೇ. ಕತೆಗಿತೇಂತ ಬೇರೆ ಇಂಟ್ರೆಸ್ಟು ತೋರಿಸ್ತೀರಾ. ಆದ್ರೆ ಎಷ್ಟು ಜನ ಈಗಿನ ಕಾಲದ ಡಾಕ್ಟ್ರುಗಳಿಗೆ ಹೀಗೆ ಇಂಟ್ರೆಸ್ಟು ಇರುತ್ತೆ. ಬರೇ ದುಡ್ಡು ಮಾಡೋದೊಂದು ಮಾತ್ರಾ ಗೊತ್ತು''.

''ಸ್ವಾಮೀ, ನಿಮ್ಮ ಬ್ಯಾಂಕಿನ ಸಂಬಳ ಈ ಹತ್ತು ವರ್ಷದಲ್ಲಿ ಎಷ್ಟು ಜಾಸ್ತಿ ಆಗಿಲ್ಲ! ಯಾವ ವಸ್ತುವಿನ ಬೆಲೆ ಕಮ್ಮಿ ಆಗಿದೆ? ಯಾವ ನನ್ಮಗ ಬರೋ ದುಡ್ಡು ಸಾಕು ಮಿಕ್ಕಿದ್ದೆಲ್ಲಾ ದಾನ ಮಾಡ್ತೀನಿ ಅಂತಾನೆ?''

'' ಆದ್ರೂ ಹೊತ್ತು ಗೊತ್ತು ಇಲ್ದೆ ರಾತ್ರಿ ಲೇಟಾದ್ರೂ ಕ್ಲಿನಿಕಲ್ಲೇ ಕುಳಿತಿರ್ತಾರಲ್ಲಾ...''

''ಯಾರಿಗಾಗಿ? ಸ್ವಂತ ಮಜಾ ಮಾಡೋಕ್ಕಾ? ಬರೋ ಪೇಷಂಟ್ ನೋವು ನಿವಾರಿಸೋದಕ್ಕಾ? ಹೀಗೆ ಅನ್ನೋ ನೀವೇ ನಾಳೆ ಏನಾದ್ರೂ ನಿಮ್ಗೆ ತೊಂದ್ರೆ ಆದಲ್ಲಿ ಕ್ಲಿನಿಕ್ ಬಾಗ್ಲು ಮುಚ್ಚಿದ್ದಲ್ಲಿ ಸಹಸ್ರನಾಮ ಎತ್ತೋದಕ್ಕೂ ಹಿಂದೇಟು ಹಾಕಲ್ಲ''.

"ಮಿಸ್ಟೇಕ್ ಮಾಡ್ಕೋಬೇಡಿ. ನಿಮ್ಮನ್ನಂದದ್ದಲ್ಲ......"

"ಇನ್ನೊಬ್ಬನನ್ನು ಅನ್ನೋ ನಾಲಿಗೆಗೆ ನಾಳೆ ನನ್ನನ್ನ ಅನ್ನೋದಕ್ಕೆ ಕಷ್ಟ ಆಗುತ್ತಾ?"

"ಎಷ್ಟಾದ್ರೂ ನಿಮ್ಮ ಪ್ರೊಫೆಶನ್ ಬಿಟ್ಟುಕೊಡ್ತೀರಾ......"

"ನನ್ನ ಪ್ರೊಫೆಶನ್ ಅಂತೀರಾ, ನಾನಲ್ಲದೆ ಯಾರು ಡಿಫೆಂಡ್ ಮಾಡ್ಬೇಕು ಹೇಳಿ! ನೀವೆಲ್ಲಾ ಗೂಬೆ ಕೂಡ್ಸೋದಕ್ಕ ರೆಡಿ ಆಗಿರೋವಾಗ ನಮ್ಮನ್ನು ನಾವು ಡಿಫೆಂಡ್ ಮಾಡಿಕೊಳ್ದೇ ಇದ್ರೆ ಇನ್ಯಾರು ಮಾಡ್ತಾರೆ? ಬೀದೀಲಿ ಹೋಗೋ ನಾಯೀನೂ ಕೈ ಎತ್ತಿದ್ರೆ ಗುರ್ ಅನ್ನುತ್ತೆ"

ಕ್ಲಿನಿಕ್ ಒಳಬಂದು ಕೂತಮೇಲೂ ಈ ಹಾಳು ವಿಚಾರಗಳು ತಲೆಯಲ್ಲಿ ತುಂಬಿವೆ. ಯಾಕೋ ಇವತ್ತು ಎದ್ದ ಗಳಿಗೇನೇ ಸರಿ ಇಲ್ಲ ಅನ್ನಿಸುತ್ತದೆ.

"ಲೇ ಮಲ್ಲಿಕಾರ್ಜುನ, ಏನಪ್ಪಾ ಇದು ಟೇಬಲ್ ಮೇಲೆ ಈರುಳ್ಳಿ?

"ಸರ ಈರುಳ್ಳೀ" ಹಿರೇ ಕೆರೂರಿನಿಂದ ಬಂದು ಇಲ್ಲಿ ನನ್ನೊಡನೆ ಅಸಿಸ್ಟೆಂಟಾಗಿ ನಿಂತ ಅವನಿಗೆ ಇಲ್ಲಿಯ ಭಾಷೆ ತಿಳಿಯುತ್ತದೆಯೋ ಇಲ್ಲವೋ,

"ನೀನು ಬೆಂಗ್ಳೂರಿಗೆ ಬಂದು ಎಷ್ಟು ವರ್ಷ ಆಯ್ತು?

"ಎಂಟು ವರ್ಷ ಸರ?

"ಎಂಟು ವರ್ಷ ಆದ್ರೂ ಇನ್ನೂ ಬೆಂಗ್ಳೂರು ಭಾಷೆ ಕಲ್ತಿಲ್ವೇನಪ್ಪಾ?"

"ಅದೇನು ಸರ ಬೆಂಗಳೂರು ಭಾಷೆ'

ನಿಜ, ಅವನಿಗೇನು ತಿಳಿಯಬೇಕು ಬೆಂಗ್ಳೂರು ಭಾಷೆ ಅಂದ್ರೆ. ಒಂದು ವ್ಯಕ್ತಿತ್ವ ಇದ್ದರೆ ತಾನೇ ಸ್ವಂತ ಭಾಷೆ ಇರುವುದು.

ನನಗೆ ತುಸು ಕೋಪ ಬಂದರೂ ತಕ್ಷಣ ಮನಸ್ಸನ್ನು ಹಿಡಿತಕ್ಕೆ ತಂದುಕೊಳ್ಳುವಾಗ ನಮ್ಮಪ್ಪ ನನಗೆ ಆಗಾಗ್ಗೆ ಹೇಳುತ್ತಿದ್ದ ಮಾತೊಂದು ನೆನಪಿಗೆ ಬಂದು ಮುಖದಲ್ಲಿ ನಸುನಗೆ ಮೂಡಿ ಮಾಯವಾಗುತ್ತದೆ.

"ನಮ್ಮಪ್ಪನಾಣೆಗೂ ನೀನೊಬ್ಬ ಸಕ್ಸೆಸ್‌ಫುಲ್ ಡಾಕ್ಟರು ಆಗಲ್ಲ" ನನ್ನ ಆಗಿನ ಮುಂಗೋಪ ಕಂಡು ಅವರಾಡುತ್ತಿದ್ದ ಮಾತುಗಳು. ಬಂದ ಕೋಪವನ್ನು ನುಂಗಲು

ಕಲಿತಿದ್ದೇನೆ ನನ್ನ ಒಳಿತಿಗೆಂದು. ಈಗ ಈ ಬಡಾವಣೆಯಲ್ಲಿ ಸಾಕಷ್ಟು ಹೆಸರು ಗಳಿಸಿಯೂ ಆಗಿದೆ.

''ಈರುಳ್ಳಿ ಅಂದ್ರೆ ನಿಮ್ಮೂರಿನ ಉಳ್ಳಾಗಡ್ಡಿ ಮಂಗ್ಳೂರಿನ ನೀರುಳ್ಳಿ. ಮಲ್ಲಿಕಾರ್ಜುನ ಉಳ್ಳಾಗಡ್ಡಿ ಅಂದ್ರೆ ಅರ್ಥ ಆಗುತ್ತೆ. ಅದನ್ನು ಕತ್ತರಿಸೋವಾಗ ಕಣ್ಣಲ್ಲಿ ನೀರು ಬರೊಂದ್ರಿಂದ ನೀರುಳ್ಳಿ ಅಂದ್ರೂ ಅರ್ಥ ಆಗುತ್ತೆ. ಆದ್ರೆ ಈ ಈರುಳ್ಳಿ ಅಂತಾ ಯಾಕೆ ಹೆಸರು ಬಂತು ಅಂತಾ ನಂಗೇ ಅರ್ಥ ಆಗ್ದೇ ಇರೋವಾಗ ಇನ್ನು ಧಾರವಾಡದ ನಿಂಗೆ ಹ್ಯಾಗೆ ಅರ್ಥ ಆದೀತು?

'' ಈ ಉಳ್ಳಾಗಡ್ಡೀ ಸರ....''

''ಬೆಂಗಳೂರಲ್ಲಿ ಯುಗಾದಿಯನ್ನು ಉಗಾದಿ ಮಾಡಿದ ಹಾಗೆ ದೀಪಾವಳಿಯನ್ನು ದಿವಾಳಿ ಮಾಡಿದ ಹಾಗೆ.''

'' ನಿಮ್ಮ ದೋಸ್ತಿ ಒಬ್ರು ಈ ಉಳ್ಳಾಗಡ್ಡೀ ಕ್ವಟ್ಟು ಹ್ವಾದ್ರು ಸರ''

''ನನ್ನ ದೋಸ್ತಿ?''

''ಹೂಂ ಸರ. 'ಕುಂದಿರ್ರಿ' ಅಂದೆ. 'ವಲ್ಲೆ; ವ್ಯಾಳೆ ಆಯ್ತು' ಅಂದ್ರು, 'ನಾಳೀ ಮುಂಜಾನೆ ಬರ್ರಿ' ಅಂದೆ. 'ಸಂಜೀಗೆ ಮನೀಕಡೀ ಇಲ್ಲಾ ದವಾಕಾನೆ ಕಡೀ ಬರ್ತೀನಿ' ಅಂದ್ರು''

ಇದೆಲ್ಲಿಯ ಈರುಳ್ಳಿ? ಹೂ ಕೊಡುವವರು ಇದ್ದಾರೆ, ಪ್ರಸಾದ ಕೊಡುವವರು ಇದ್ದಾರೆ. ವಿಭೂತಿ ಫಲ ಮಂತ್ರಾಕ್ಷತೆ ಕೊಡುವವರೂ ಇದ್ದಾರೆ, ಹಜ್‌ನಿಂದ ಹಿಂತಿರುಗಿದಾಗ ಖರ್ಜೂರ, ಉತ್ತುತ್ತೆ ಕಲ್ಲುಸಕ್ಕರೆ ಕೊಟ್ಟವರೂ ಇದ್ದಾರೆ. ಆದರೆ ಈರುಳ್ಳಿ!

ಬಿಸಿ ಆಗಿದ್ದ ತಲೆ ಸರಿಪಡಿಸಿಕೊಳ್ಳಲು ಒಂದೇ ದಾರಿ ಮಲ್ಲಿಕಾರ್ಜುನನನ್ನು ತುಸು ಲೇವಡಿ ಮಾಡುವುದು.

''ಇದ್ಯಾರಪ್ಪಾ ಅರ್ಜುನನಿಗೆ ಮಲ್ಲಿಗೆ ಮುಡಿಸಿದವರು?''

''ಅರ್ಜುನ? ಮಲ್ಲಿಗೆ? ಏನು ಸರ ಅದು?''

''ನಿನ್ನ ಹೆಸರಪ್ಪಾ .ಮಲ್ಲಿಕಾ ಅರ್ಜುನ'' ನನಗೆ ಗೊತ್ತಿದ್ದ ಸಂಧಿ ವಿಂಗಡಣೆ ಮಾಡಿದೆ.

"ಸರ.......

ಟೀಕು ಟಾಕಾಗಿ ಒಳಬಂದ ಮನುಷ್ಯನನ್ನು ಒಂದರೆಕ್ಷಣ ನಾನು ಪೀಕ್ಷಿಸುವಾಗ ಮಲ್ಲಿಕಾರ್ಜುನ

'ಇವರೇ ಸರ ಉಳ್ಳಾಗಡ್ಡೀ...."

"ಸಿಟ್ ಡೌನ್ ಪ್ಲೀಸ್"

ಈ ವ್ಯಕ್ತಿಯನ್ನು ಎಲ್ಲೋ ನೋಡಿದ ಹಾಗೆ ಅನಿಸುತ್ತದೆ. ಹಸಿರು ರೇಬನ್ ಕನ್ನಡಕ, ನೀಲಿ ಬಿಳಿ ಪಟ್ಟಿಗಳ ಗರಿಗರಿ ಟೈ., ನೀಟಾಗಿರುವ ಶರ್ಟು, ನೀಲಿ ಪ್ಯಾಂಟ್, ಪ್ಯಾಕೆಟ್‌ನಲ್ಲಿ ಮೊಬೈಲ್ ಕೈಯಲ್ಲಿ ಕಾರಿನ ರಿಮೋಟು. ಹ್ಲಾಂ, ಈಗತಾನೇ ಕಾರಿನಲ್ಲಿ ಹೋಗುತ್ತಾ ವೇವ್ ಮಾಡಿದ ವ್ಯಕ್ತಿ.

"ಮಾರ್ನಿಂಗ್ ಡಾಕ್ಟರ್, ಸಂಜೆ ಬರೋಣ ಅಂದ್ಕೊಂಡೆ ಆದ್ರೆ ದೂರ ಹೋಗಿರ್ಲಿಲ್ಲ. ಕಾರು ರಿವರ್ಸ್ ಮಾಡಿ ಬಂದ್ಬಿಟ್ಟೆ"

"ಗುಡ್" ಅಂದೆ

" ಹ್ಯಾಗಿದ್ದೀರಾ ಡಾಕ್ಟ್ರೇ ನೀವು. ಹೌ ಈಸ್ ದ ಪ್ರಾಕ್ಟೀಸ್, ಇವತ್ತು ಸ್ವಲ್ಪ ಡಲ್ ಇದ್ದ ಹಾಗಿದೆ! ಇನ್ನೂ ಯಾರು ಬಂದ ಹಾಗಿಲ್ಲ. ನಾನು ಕೊಟ್ಟ ಈರುಳ್ಳಿ ಇಲ್ಲೆ ಇದ್ಯಲ್ಲಾ ಟೇಬಲ್ ಮೇಲೆ ಇವತ್ತು ಶನಿವಾರ ಅಲ್ವಾ, ಹಾಗಿದ್ರೆ ಒಂದು ಸಣ್ಣ ಕಪ್ಪಲ್ಲಿ ನೀರು ತರ್ಸಿ ಅದ್ರಲ್ಲಿ ಇದನ್ನು ಇಟ್ಬಿಡಿ, ಈ ಮೂಲೇನಲ್ಲಿ ಅಲ್ಲ. ಇನ್ನೊಂದು ಆರು ಅಂಗುಲ ಈ ಕಡೆ. ನಾಳೆ ಬರ್ತೀನಿ. ಇವತ್ತಿನ ಪ್ರಾಕ್ಟೀಸು ಹ್ಯಾಗೆ ಇತ್ತೂಂತ ನಾಳೆ ತಿಳಿಸಿ ನನಗೆ. ಬ್ಯಾ"

ಬಂದ ರೀತಿಯಲ್ಲೇ ಆ ವ್ಯಕ್ತಿ ಹೊರಟು ಹೋದಾಗ ನನಗೆ ಒಂದೂ ಅರ್ಥ ವಾಗದೆ ಗಲಿಬಿಲಿಯಾಗುತ್ತದೆ. ಸಾಮಾನ್ಯವಾಗಿ ಪರಿಚಯಸ್ಥರ ಮುಖ ಮರೆಯುವಂತಹ ದೊಡ್ಡ ಗುಣ ನನ್ನಲ್ಲಿಲ್ಲ. ನಿಧಾನವಾಗಿ ರೋಗಿಗಳ ಒತ್ತಡದಲ್ಲಿ ಅವನ, ಅವನ ಈರುಳ್ಳಿ ಯ ಪ್ರಭಾವ ಮರೆತುಹೋಯಿತು.

ಮಧ್ಯಾಹ್ನದ ವಿಶ್ರಾಂತಿಯಿಂದೇಳುವಷ್ಟರಲ್ಲಿ ನನ್ನ ಕಾಲೇಜು ಸ್ನೇಹಿತ ಸಹಪಾಠಿ ಪ್ಯಾಟ್ರಿಕ್ ದೊರೈರಾಜ್ ಮನೆಗೆ ಬಂದ. ಕಳೆದ ಎರಡು ವರ್ಷಗಳ ಹಿಂದೆ ಟಾನ್ಜೇನಿಯಾದಿಂದ ಹಿಂತಿರುಗಿದ ಬಳಿಕ ಇದೇ ಬಡಾವಣೆಯಲ್ಲಿ ಪ್ರಾಕ್ಟೀಸು ಪ್ರಾರಂಭಿಸಿದ್ದನೂ ನಾವಿಬ್ಬರೂ ಭೇಟಿಯಾದದ್ದು ಇದೇ ಮೊದಲು. ಹೀಗೆ

ಲೋಕಾಭಿರಾಮವಾಗಿ ಮಾತಾಡುತ್ತಾ ತನ್ನ ಕ್ಲಿನಿಕ್ ತೋರಿಸುತ್ತೇನೆಂದು ಕರೆದುಕೊಂಡು ಹೋದ. ಹೊಸ ಕ್ಲಿನಿಕ್, ಜೇಡರ ಬಲೆ, ಧೂಳು ಕಸ ತುಂಬದೆ ಇನ್ನೂ ತುಸು ಸ್ವಚ್ಛವಾಗಿಯೇ ಇದೆ.

"ಲೋ ದೊರೈ ಪರ್ವಾಗಿಲ್ಲಮ್ಮ ನಿನ್ನ ಕ್ಲಿನಿಕ್ ಎಲ್ಲಾ ಕಡೇನೂ ಹಜಾಮರ ಅಂಗಡಿ ಡಾಕ್ಟರ ಕ್ಲಿನಿಕ್‌ಗಿಂತ ನೀಟಾಗಿರುತ್ತೆ"

"ನಿಜ, ನೀನು ಹೇಳೋದು ನಿಜ. ಯಾಕಂದ್ರೆ ಅಲ್ಲಿ ಜನ ಬರ್ತಾರೆ. ಇಲ್ಲಿ ಬರೋದು ಹಗಲಲ್ಲಿ ನೊಣ ರಾತ್ರಿ ಸೊಳ್ಳೆ. ಹಗಲು ರಾತ್ರಿ ಕ್ಲೀನ್ ಮಾಡಿ ಮಾಡಿ ಕ್ಲೀನಿಕ್ ಆಗಿದೆ ನೋಡು"

"ಯಾಕೋ ಪ್ರಾಕ್ಟೀಸ್ ಚನ್ನಾಗಿಲ್ವೇನೋ?"

"ಪೇಷಂಟು ನೋಡೋದನ್ನೆಲ್ಲಾ ಟಾನ್ಜೇನಿಯದಲ್ಲೇ ಬಿಟ್ಟು ಇಲ್ಲಿ ರಜಾ ತಗೊಂಡು ಮಜಾ ಮಾಡೋಕೆ ಈ ಅಂಗ್ಡೀಗೆ ರೆಂಟು, ಕರೆಂಟ್ ಬಿಲ್, ಸಂಬಳ......."

ಸುತ್ತ ಮುತ್ತ ಕಣ್ಣು ಹಾಯಿಸಿದಾಗ ಅವನ ಟೇಬಲಿನ ಮೇಲೂ ಅಂದು ಬೆಳಗ್ಗೆ ನನ್ನ ಟೇಬಲಿನ ಮೇಲೆ ಕಂಡಂತಹ ಅದೇ ಗಾತ್ರದ ಈರುಳ್ಳಿ.

"ಇದೇನೋ ದೊರೆ?"

"ಈರುಳ್ಳಿ, ಯಾಕೆ ಪೇಷೆಂಟು ನೋಡೋದ್ರಲ್ಲಿ ತಿನ್ನೋ ಈರುಳ್ಳೀನೂ ಮರ್ತು ಹೋಯ್ತಾ?

"ಈ ಹಾಳಾದ ಈರುಳ್ಳಿ ಇಲ್ಲಿಗೆ ಹೇಗೆ ಬಂತು"

"ಹಾಳಾದ್ದು ಏನು? ಚೆನ್ನಾಗೇ ಇದೆ"

"ನನ್ನ ಕ್ಲಿನಿಕ್‌ಗೂ ಯಾವನೋ ಒಬ್ಬ ಹಾಕ್ಬಿಟ್ಟು ಹೋಗಿದ್ದ"

"ಯಾಕೆ, ಇರೋ ಪ್ರಾಕ್ಟೀಸ್ ಸಾಲಲ್ಲ. ನಮಗೆ ಬರೋ ನಾಲ್ಕು ಪೇಷಂಟೂ ನಿನಗೇ ಬರಬೇಕೂಂತಾನಾ?"

"ನನ್ಗೆ ಅರ್ಥ ಆಗ್ತಾ ಇಲ್ಲಾ ಕಣೋ ನೀನು ಹೇಳ್ತಾ ಇರೋದು"

"ಟೇಬಲ್ ಮೇಲೆ ಈರುಳ್ಳಿ ಇಡ್ಕೊಂಡು ಅರ್ಥ ಆಗಲ್ಲ ಅಂದ್ರೆ ನಾನು ನಂಬ್ತೀನಾ?"

"ನಿಜವಾಗಿ ಹೇಳ್ತೀನಿ ಕಣೋ"

"ನಿನ್ನಿಂದ್ಲೇ ಸುರು ಆಗಿ ಈಗ ಏನೂ ತಿಳಿದೇ ಇರೋವ್ನ ಹಾಗೆ ಆಡ್ತಿದ್ರೆ ಯಾರು ನಂಬ್ತಾರೆ ಹೇಳು"

"ಹೇಳೋ ಹಾಗಿದ್ರೆ ಹೇಳು. ಇಲ್ಲಿದ್ರೆ ಬಿಡು. ನಿನ್ನಿಷ್ಟ ನಂಗಂತೂ ಒಂದ್ನೂರು ಗೊತ್ತಿಲ್ಲ."

ಕ್ಲಿನಿಕಿನ ಶಟರ್ ಎಳೆದುಕೊಂಡು ಪಕ್ಕದಲ್ಲಿದ್ದ ಹೋಟೆಲ್‌ಗೆ ಹೋಗಿ ಕಾಫಿ ಕುಡಿಯುವ ತನಕ ಇಬ್ಬರು ಬಾಯಿ ಬಿಚ್ಚುವುದಿಲ್ಲ.

"ನೋಡಮ್ಮಾ, ನೀನು ನಂಬ್ತೀಯೋ ಬಿಡ್ತಿಯೋ ಈಗ ಒಂದು ತಿಂಗಳಿಂದ ಪ್ರಾಕ್ಟೀಸು ಪರ್ವಾಗಿಲ್ಲ, ಈ ಈರುಳ್ಳಿ ನಾನು ಟೇಬಲ್ ಮೇಲೆ ಇಡೋದಕ್ಕೆ ಸುರು ಮಾಡಿದಾಗ್ಲಿಂದ ದಿನೇ ದಿನೇ ಪೇಷಂಟೂ ಜಾಸ್ತಿ ಆಗ್ತಾ ಇದ್ದಾರೆ."

"ಗುಡ್. ಈಗ ಸೀಸನ್ ಇಂಪ್ರೂ ಆಗಿದೆ. ಬೆಂಗ್ಳೂರಲ್ಲಿ ಮಳೆ ಬಂದು ಸ್ಕೂಲು ಶುರು ಆಯ್ತುಂದ್ರೆ ಕಾಯಿಲೆ ಜಾಸ್ತಿ ಆಗುತ್ತೆ, ಅದಕ್ಕೂ ನಿನ್ನ ಈರುಳ್ಳಿಗೂ.....'

"ನೀನು ಏನೇ ಹೇಳು, ಒಂದು ಒಂದೂವರೆ ವರ್ಷ ನೊಣ ಹೊಡೀತಾ ಕುಳಿತೆ. ಅಲ್ಲಿ ಅಷ್ಟು ಬಿಸಿ ಆಗಿದ್ದವನಿಗೆ ಇಲ್ಲಿ ಸುಮ್ನೇ ಕುಳಿತಿರೋದಕ್ಕೆ ಆಗಲ್ಲ ನೋಡು. ಎರಡು ತಿಂಗ್ಳ ಹಿಂದೆ ಒಬ್ಬ ಬಂದ. ಡಾಕ್ಟರ್ಸ್ ಸ್ಪೆಷಲ್ ಕನ್ಸಲ್ಟೆಂಟ್ ಅಂದ. ನಾನು ಕುಳಿತುಕೊಳ್ಳೊ ಜಾಗ ಪೇಷಂಟ್ಸ್ ಕುಳಿತುಕೊಳ್ಳೋ ಜಾಗ ಟೇಬಲ್ ಹಾಕ್ಕೋ ಜಾಗ ಕ್ಲಿನಿಕ್ ಟೈಮಿಂಗ್ಸ್, ಫೀಸು ಎಲ್ಲಾ ಕೇಳಿಸಿಕೊಂಡು ಸಜೆಶನ್ ಕೊಟ್ಟ ಬದಲಾವಣೆಗೆ, ಜೊತೆಗೆ ಈ ಒಂದು ಈರುಳ್ಳಿ. ಇದಕ್ಕೂ ಒಂದು ಕ್ರಮ ಇದೆ. ಸೋಮವಾರ ಶನಿವಾರ ಸ್ವಲ್ಪ ನೀರಲ್ಲಿ ಇಟ್ಟು ಒಂದು ಬದಿಯಲ್ಲಿಟ್ಟರೆ ಮಂಗಳವಾರ ಹಾಲಲ್ಲಿ ಇಟ್ಟು ಇಡಬೇಕು. ಬುಧವಾರ ಶುಕ್ರವಾರ ಹಾಲಿಗೆ ಜೇನು ಬೆರೆಸಿ ಇಡಬೇಕು. ಗುರುವಾರ ಹಾಗೆಯೇ ಇಡಬೇಕು. ಆದರೆ ಅದರ ಅಡಿಯಲ್ಲಿ ಒಂದು ರೂಪಾಯಿಯ ನಾಣ್ಯ ಅದೂ ನೆಹರು ತಲೆ ನಾಣ್ಯ. ಭಾನುವಾರ ಆ ಜಾಗದಲ್ಲಿ ಎರಡು ಊದುಕಡ್ಡಿ, ದೇವರ ಫೋಟೋ ಮುಂದೆ ಆ ದಿನ ಊದು ಕಡ್ಡಿ ಹಚ್ಚಬಾರದು.

"ಇಷ್ಟೆಲ್ಲಾ ಯಾಕೆ?"

"ಪ್ರಾಕ್ಟೀಸು ಇಂಪ್ರೂ ಆಗೋದಕ್ಕೆ"

" ನಿಂಗೂ ಇದರಲ್ಲಿ ನಂಬಿಕೆ ಇದ್ಯಾ ? ಪ್ರಾಕ್ಟೀಸು ಇಂಪ್ರೂ ಆಯ್ತಾ? "

" ಪ್ರಾಕ್ಟೀಸು ಈಗ ಒಂದು ತಿಂಗಳಲ್ಲಿ ಇಂಪ್ರೂ ಆಗಿರೋದ್ರಿಂದ ನಂಬಿಕೆ ಬರ್ತಾ ಇದೆ. ಮೊದಲಲ್ಲಿ ನಂಬಿಕೆ ಇರ್ಲಿಲ್ಲ"

" ಈಗ ಸೀಸನ್ ಇಂಪ್ರೂ ಆಗಿರೋದ್ರಿಂದ......"

" ನೀನು ಅಂದ್ಕೊಂಡಿರೋದು ಹಾಗೆ'

" ಹೋಗ್ಲಿಬಿಡು, ಬೇರೆಯಾರಾದ್ರೂ ಹಾಗೆ ಮಾಡಿರೋವು...... "

" ಯಾಕೆ ನೀನೇ ಇಲ್ವಾ ? "

" ನಾನು ? ಈರುಳ್ಳಿ !"

" ಆ ವ್ಯಕ್ತಿ ಹಾಗೆ ಅಂದಾ. ಈ ಏರಿಯಾದಲ್ಲಿ ನೀನೇ ತಾನೇ ಸ್ಟಾರ್ಟು ಮಾಡಿದ್ದು. ಆದ್ದರಿಂದ್ಲೇ ನಿಂಗೆ ಪ್ರಾಕ್ಟೀಸ್ ಚೆನ್ನಾಗಿರೋದು......"

" ಪ್ರಾಕ್ಟೀಸ್ ಚೆನ್ನಾಗಿರೋದು ಅವರವರ ಅದೃಷ್ಟ. ಟೈಂಗೆ ಸರಿಯಾಗಿ ಬಂದು ನೀಯತ್ತಿಂದ ಕೆಲ್ಸ ಮಾಡಿದ್ರೆ, ಬರೋ ರೋಗಿಗಳೊಡನೆ ಚೆನ್ನಾಗಿ ನಾಲ್ಕು ಮಾತಾಡಿದ್ರೆ ಪ್ರಾಕ್ಟೀಸ್ ಪಿಕ್ ಅಪ್ ಆಗುತ್ತೆ. ನಿನ್ಗೆ ಗೊತ್ತಿಲ್ದೇ ಇರೋದು ನನ್ಗೆ ಗೊತ್ತಿಲ್ಲ. ನನ್ಗೆ ಗೊತ್ತಿಲ್ದೇ ಇರೋದು ಇನ್ನೊಬ್ಬನಿಗೆ ಗೊತ್ತಿಲ್ಲ. ಎಲ್ರೂ ಮಾಡೋದು ಒಂದೇ. ಆದ್ರೆ ರೀತಿಯಲ್ಲಿ ವ್ಯತ್ಯಾಸ......"

" ಹೊಟ್ಟೆ ತುಂಬಿರೋ ವ್ಯಕ್ತಿ ಹೇಳಿದ್ದೇ ಪುರಾಣ ಆಗುತ್ತೆ"

" ಹೋಗ್ಲಿಬಿಡಪ್ಪಾ ನಿನ್ನ ನಂಬಿಕೆ. ಆ ವ್ಯಕ್ತಿ ಎಷ್ಟು ಛಾರ್ಜು ಮಾಡ್ದ? "

ನನ್ನ ಸ್ನೇಹಿತ ದೊರೈರಾಜ್ ನಿಧಾನವಾಗಿ ಮೆಲು ದನಿಯಲ್ಲಿ " ಐದು ಐದು ಸಾವಿರ. ಮೂರು ತಿಂಗಳಿಗೊಮ್ಮೆ ಇನ್ನೂರು" ತಕ್ಷಣ ತನ್ನನ್ನು ಸಮರ್ಥಿಸಿಕೊಳ್ಳುತ್ತಾ. " ಆದ್ರೆ ಗ್ಯಾರಂಟಿ, ನೋಡು ಅವ್ನಿಗೆ ಕೊಟ್ಟಿರೋ ಹಣಕ್ಕ ಎಷ್ಟೊಂದು ಪಾಲು ಪ್ರಾಕ್ಟೀಸ್ ಇಂಪ್ರೂ ಆಗಿದೆ".

ಸಂಜೆ ನಾನು ಕ್ಲಿನಿಕ್‌ಗೆ ಬಂದಾದ ಮೇಲೂ ಆ ಈರುಳ್ಳಿ ನನ್ನ ತಲೆ ಕೊರೆಯುತ್ತಲೇ ಇತ್ತು. ನನ್ನ ಟೇಬಲ್ ಮೇಲಿನ ಈರುಳ್ಳಿ ಹಾಗೇ ಇದೆ. ಮಲ್ಲಿಕಾರ್ಜುನನನ್ನು ಕರೆದು ಅದನ್ನು ಎಸೆಯಲು ಹೇಳುತ್ತೇನೆ. ಅವನು ಯಾಕೆ ಎಂದು ಕೇಳಿದಾಗ ನಡೆದುದನ್ನು

ಹೇಳುತ್ತೇನೆ. ಅವನು ಈರುಳ್ಳಿ ಎಸೆಯಲು ಅಂಜಿ ನನ್ನನ್ನು ಅಂಗಲಾಚುತ್ತಾನೆ. ಹೊರಗೆ ಬಾನಲ್ಲಿ ಮೋಡ ಕಪ್ಪು ಕಟ್ಟಿ ಒಂದೊಂದಾಗಿ ಹನಿ ಉದುರಿ ಮಳೆ ಭೋರ್ಗರೆಯ ತೊಡಗಿದಾಗ ನನಗೆ ತುಸು ವಿಶ್ರಾಂತಿ. ಹೊರಗೆ ಯಾರೂ ರೋಗಿಗಳು ಕುಳಿತಿಲ್ಲ. ಈ ಮಳೆಯಲ್ಲಿ ಹೇಗೆ ಬಂದಾರು. ಏನಿದ್ದರೂ ಈ ಮಳೆಯಲ್ಲಿ ನೆನೆದು ಥಂಡಿಯಾಗಿ ಜ್ವರ ಬಂದು ನಾಳೆ ಬಂದಾರು. ತಕ್ಷಣ ಮಲ್ಲಿಕಾರ್ಜುನನನ್ನು ಕರೆದು

'' ಈ ಈರುಳ್ಳಿ ಇಟ್ಟ ಘಳಿಗೆ ಪೇಷಂಟ್ಸ್ ಯಾರೂ ಇಲ್ಲ ನೋಡು'

''ಹ್ಯಾಂಗೆ ಸರ ಆದು, ಉಳ್ಳಾಗಡ್ಡೀ ಮಹಿಮೆ ಅಂತೀರಾ? ಮಳೆ.....''

'' ಹಾಗಿದ್ದಲ್ಲಿ ನಿನ್ನ ಉಳ್ಳಾಗಡ್ಡೀಗಿಂತ ಮಳೆ ಮಹಿಮೆ ಜಾಸ್ತಿ ಎಂದಾಯ್ತಲ್ಲ. ಎಸಿ ಅದನ್ನು ಹೊರಗೆ''

ತಕ್ಷಣ ನನ್ನ ಮೆದುಳಿನ ಪದರದೊಳಗೆ ಅಡಗಿ ಹೋದ ಯಾವುದೋ ಒಂದು ಘಟನೆ ನೆನಪಿಗೆ ಬಂದು ಅವನನ್ನು ಕರೆದು

'' ಲೇ ಮಲ್ಲಿ ಬಾ ಇಲ್ಲಿ. ಈಗ ಜ್ಞಾಪಕ ಬಂತು ಈ ಮನುಷ್ಯ ಈರುಳ್ಳಿ ಕೊಟ್ಟು ಹೋದ್ನಲ್ಲಾ. ಎರಡು ವರ್ಷಗಳ ಹಿಂದೆ ಮೆಡಿಕಲ್ ರೆಪ್ರಸೆಂಟೇಟಿವ್ ಆಗಿಬಂದಿದ್ದ. ಆ ದಿನ ನನ್ನ ಟೇಬಲ್ ಮೇಲೆ ಒಂದು ಈರುಳ್ಳಿ ಈ ತರದ್ದೇ ಇತ್ತು. ಅದನ್ನು ಯಾಕೆ ಅಲ್ಲಿಟ್ಟಿದ್ದು ಅಂತಾನೂ ಕೇಳಿದ್ದ. ನಾನು ನೋಡೇ ಇರ್ಲಿಲ್ಲ. ಗೊತ್ತಿಲ್ಲ ಅಂದೆ. ಕೆಳಗೆ ಯಾರೋ ಬೀಳಿಸಿರಬೇಕು. ನೀನೇ ಅದನ್ನು ಎತ್ತಿ ಅಲ್ಲಿಟ್ಟಿರಬೇಕು. ನನ್ಗೆ ಇರೋವಷ್ಟು ಪ್ರಾಕ್ಟೀಸ್ ಬೇರೆಯವರಿಗೆ ಯಾಕೆ ಇಲ್ಲಾಂತಾನೂ ಕೇಳ್ದ. ಗೊತ್ತಿಲ್ಲ ಅಂದೆ. 'ಟೇಬಲ್ ಯಾಕೆ ಈ ಕಡೆ, ಮಂಚ ಯಾಕೆ ಆ ಕಡೆ ಅಂತಾನೂ ಕೇಳ್ದ. ಸುಮ್ನೆ ನನ್ನ ಕನ್ವೀನಿಯನ್ಸ್‌ಗೆ, ಬೇರೆ ಇಂಪಾರ್ಟೆನ್ಸ್ ಏನು ಇಲ್ಲಾ' ಅಂದೆ. 'ವಾಸ್ತು ಮೇಲೆ ನಂಬಿಕೆ ಇದ್ಯಾ' ಅಂದ 'ಇಲ್ಲಾ' ಅಂದೆ ನಾನು. ಒಂದು ತಿಂಗಳು ಬಿಟ್ಟು ಬಂದಾಗ ಅವನೇ ಒಂದು ಈರುಳ್ಳಿ ತಂದಿದ್ದ. ಸುಮ್ನೆ ಇಟ್ಟು ಕೋ' ಅಂದಿದ್ದ. ಅವನ ನಗುವಿನಲ್ಲಿ ಒಂದು ಕೊಂಕುತನವೂ ಇದ್ದಂತಿತ್ತು.''

ಮಲ್ಲಿಕಾರ್ಜುನ ನನ್ನ ಮಾತುಗಳನ್ನು ಕೇಳುತ್ತಿದ್ದವನು ತುಟಿ ಪಿಟಿಕ್ಕೆನುವುದಿಲ್ಲ. ಇದಕ್ಕಿದ್ದಂತೆ ನಾನು.

" ಲೇ ಮಲ್ಲಿ, ಅವನ ಎಸ್ಟೀಮ್ ಕಾರ್ ಜಬರ್ದಸ್ತ್ ಎಲ್ಲಾ ಅವನ ಈ ಹೊಸ ಕನ್ಸಲ್ಟೆನ್ಸಿಯಿಂದ. ಪ್ರಾಕ್ಟೀಸು ಇಲ್ದೇ ಇರೋ ಡಾಕ್ಟರುಗಳನ್ನು ನಂಬಿಸಿ, ಈರುಳ್ಳಿ ಶಾಸ್ತ್ರ ಅಂದ್ರೆ ನಿನ್ನ ಉಳ್ಳಾಗಡ್ಡೀ ಶಾಸ್ತ್ರ ಹೇಳಿ.......... ಲೋಫರ್ ನನ್ಮಗ.... ನಾಳೆ ಬಂದ್ರೆ ಒಳ ಕಳಿಸ್ಬೇಡ ಹೊರಗಿಂದ್ಲೇ ಆಚೆ ಕಳ್ಸು" ಹೊರಗೆ ಧಾರಾಕಾರ ಮಳೆಯ ಜೊತೆಗೆ ಗುಡುಗು ಸಿಡಿಲೂ ಸೇರಿಕೊಳ್ಳುತ್ತದೆ.

ಮಲ್ಲಿಕಾರ್ಜುನ ನನ್ನ ರೂಂನಿಂದ ಹೊರ ಹೋಗುತ್ತಾ ಪಿಸುದನಿಯಲ್ಲಿ "ಶಾಣ ಅದಾನ್ರಿ" ಅಂದುದು ನನ್ನ ಕಿವಿಗೂ ಅವನ ಅಣಕಿಸುವಂತಹ ಕಣ್ಣಂಚಿನ ನಗು ನನ್ನ ಕಣ್ಣಿಗೂ ಬೀಳುತ್ತದೆ.

ನಿಸಾರ್ ಅಹಮದರ "ಕುರಿಗಳು ಸಾರ್ ನಾವು ಕುರಿಗಳು" ಕವನ ನೆನಪಿಗೆ ಬರುತ್ತದೆ.



ಆಸೆಗಳನ್ನು ಗೆದ್ದವೆಂದು ಹಿಗ್ಗುವುದು; ಅವುಗಳ ಕತ್ತು ಹಿಚುಕಿ ಮಣ್ಣು ಮುಕ್ಕಿಸಿದೆವೆಂದು ಬೆನ್ನು ತಟ್ಟಿಕೊಳ್ಳುವುದು ಜಾಣತನದ ಲಕ್ಷಣವಲ್ಲ. ಅವುಗಳನ್ನು ಹದ್ದುಬಸ್ತಿನಲ್ಲಿರಿಸಿಕೊಂಡು, ಸ್ವಶ್ರೇಯಸ್ಸು ಹಾಗೂ ಪರಹಿತಗಳಿಗೆ ನೆರವಾಗುವಂತೆ ದುಡಿಸಿಕೊಳ್ಳುವುದರಲ್ಲಿ ವಿವೇಕವಿದೆ.

★★★★

ಹಿರಿದಾದ ಹಂಬಲದೆದುರು ಕಿರಿಯಾಸೆ ಮಣಿಯಬೇಕು. ತಲೆ ಮರೆಸಬೇಕು. ಅದರಿಂದ ವ್ಯಕ್ತಿಯ ಬದುಕು ಸಮೃದ್ಧ ಬಲಿಷ್ಠ. ವಿಸರ್ಜನೀಯ ಯಾವುದು ? ಪೋಷಣೀಯ ಯಾವುದು ? ಎಂಬ ಯುಕ್ತಾಯುಕ್ತ ವಿವೇಚನೆ ಪ್ರಾಜ್ಞತೆಯ ಹೆಗ್ಗುರುತು. ಅಲ್ಪ ಮಹತ್ತುಗಳ ಪರಿಜ್ಞಾನ ಸತ್ಸಂಕಲ್ಪಕ್ಕೆ ಮೂಲ ಮಾನ.

– ಕೆ. ಎಸ್. ನಿಸಾರ್ ಅಹಮದ್

# ಕಾರಂತರ ನೆನಪು ಸದಾ ಹಸಿರು

- ಶಿವಯ್ಯ ನಾವಡ, ಐರೋಡಿ.

ಕರ್ನಾಟಕದ ಜಾನಪದ ಕಲಾ ಪ್ರಕಾರಗಳಲ್ಲಿ ಒಂದಾದ ಕರಾವಳಿ ತೀರದ ಬಡಗುತಿಟ್ಟು ಯಕ್ಷಗಾನ ಕಲೆಯು ಇಂದು ವಿಶಿಷ್ಟ ಸ್ಥಾನ ಮತ್ತು ಗೌರವವನ್ನು ಪಡೆಯುತ್ತಿರುವುದಕ್ಕೆ ಕೋಟ ಶಿವರಾಮಕಾರಂತರ ಅವಿರತ ಶ್ರಮವೇ ಪ್ರಮುಖ ಕಾರಣವೆಂದರೆ ಅತಿಶಯೋಕ್ತಿಯಲ್ಲ. ಜಾಗತಿಕ ಮಾಧ್ಯಮವಾಗಿ ಯಕ್ಷಗಾನಕಲೆಯನ್ನು ವಿಶ್ವದ ಉದ್ದಗಲಕ್ಕೂ ಪರಿಚಯಿಸಿದ ಕಾರಂತರನ್ನು ಸ್ಮರಿಸಿ ಗೌರವಿಸಬೇಕಾದುದ್ದು ಆದ್ಯ ಕರ್ತವ್ಯವಾಗಿದೆ. ಕಾರಂತರು ಭಾಷೆಯ ತೊಡಕು ಮತ್ತು ಸಂಪ್ರದಾಯದ ಜಿಡುಕು - ಎಂಬ ಈ ಎರಡು ಅಂಶಗಳನ್ನು ತ್ಯಜಿಸಿ, ಕಲೆಯ ಅಭಿವ್ಯಕ್ತಿಗೆ ಪೋಷಕವಾಗುವ ತಮ್ಮ ಪರಿಕಲ್ಪನೆ ಮತ್ತು ಚಿಂತನೆಗಳಿಂದೊಡಗೂಡಿದ ಯಕ್ಷರಂಗವೆನ್ನುವ ನವೀನ ಕಲಾಪ್ರಕಾರವನ್ನು ವಿದೇಶಗಳಲ್ಲಿ ಪ್ರದರ್ಶಿಸುವುದಕ್ಕಾಗಿ ಹುಟ್ಟುಹಾಕಿದರು. ಅಂತರಾಷ್ಟ್ರೀಯ ಮಟ್ಟದಲ್ಲಿ ಭಾರತೀಯ ಜಾನಪದ ಕಲೆಗಳಲ್ಲಿ ಯಕ್ಷಗಾನವನ್ನು 'ಯಕ್ಷರಂಗ'ದ ಪ್ರದರ್ಶನದ ಮೂಲಕ ಪ್ರದರ್ಶಿಸಿದರು. ವಿದೇಶಿಯರಿಗೆ ಈ ಕಲೆಯ ವೈಭವವು ಬಹಳಷ್ಟು ಆಕರ್ಷಣೀಯವಾದದ್ದಲ್ಲದೇ ಪ್ರಪಂಚದಾದ್ಯಂತ ವಿಶೇಷ ಮನ್ನಣೆಗೆ ಪಾತ್ರವಾಯಿತು.

ಯಕ್ಷಗಾನ ಕಲೆಯ ಸಂಪ್ರದಾಯವಾದಿಗಳು ಕಾರಂತರ ಕಲ್ಪನೆ 'ಯಕ್ಷರಂಗ'ಕ್ಕೆ ಕಡುವಿರೋಧವನ್ನು ತೋರಿದರು. ಆದರೆ ಅದನ್ನು ಲೆಕ್ಕಿಸದ ಕಾರಂತರು ಟೀಕೆಗಳಿಗೆ ವಿಚಲಿತರಾಗದೆ ತಮ್ಮ ಕಾಯಕವನ್ನು ಮುಂದುವರೆಸಿದರು. ಹೊಸ ಪ್ರಸಂಗಗಳ ಹಾವಳಿಯಿಂದ (1980ರ ದಶಕದಲ್ಲಿ) ಸಂಪ್ರದಾಯಬದ್ಧವಾಗಿ ಅದು ತನಕ ಪ್ರದರ್ಶಿತವಾಗುತ್ತಿದ್ದ ಯಕ್ಷಗಾನ ಕಲೆಯ ಎಲ್ಲಾ ನಾಲ್ಕು ಅಂಗಗಳು (ಗಾಯನ, ಆಹಾರ್ಯ, ನೃತ್ಯ, ವಾಚಿಕ) ವಿರೂಪಗೊಳ್ಳುತ್ತಿದೆ ಎಂಬುದನ್ನು ಗಮನಿಸಿದ ಕಾರಂತರು ತಮ್ಮ ಅಂತರಂಗದಲ್ಲಿ ಕಲೆಯ ಬಗೆಗಿದ್ದ ಅದಮ್ಯ ಪ್ರೀತಿಗೆ ಅನ್ಯಾಯವಾಗುತ್ತಿದೆ ಎಂಬುದನ್ನು ಮನಗಂಡು ಕಲೆಯ ನೈಜ ಸ್ವರೂಪದ (ಸಂಪ್ರದಾಯದ) ಉಳಿವಿಗಾಗಿ ಅದಾಗಲೇ ಯಶಸ್ವಿಯಾಗಿ ಕಾರ್ಯ ನಿರ್ವಹಿಸುತ್ತಿರುವ ಯಕ್ಷಗಾನ ತರಬೇತಿ ಕೇಂದ್ರ ಉಡುಪಿಗೆ ತಮ್ಮ ಸಾಲಿಗ್ರಾಮದ 'ಸುಹಾಸ'ದಿಂದ ಪ್ರತಿದಿನ ಹೋಗಿ ಅಲ್ಲಿನ

ಚಟುವಟಿಕೆಗಳನ್ನು ಜಾಗರೂಕರಾಗಿ ಗಮನಿಸುತ್ತಾ ನಿರ್ದೇಶಿಸುತ್ತಾ ಬಂದರು. ಅನೇಕ ವಿಚಾರಗೋಷ್ಠಿಗಳನ್ನೂ, ಕಮ್ಮಟಗಳನ್ನೂ ಏರ್ಪಡಿಸಿ ಯಕ್ಷಗಾನ ಕಲೆಯ ಉತ್ಕರ್ಷಕ್ಕಾಗಿ ಕಲಾಸಕ್ತರ ಹಾಗೂ ಕಲಾವಿದರ ಅಭಿಪ್ರಾಯಗಳನ್ನು ಸಂಗ್ರಹಿಸಿ ತನ್ಮೂಲಕ ಸಂಪ್ರದಾಯದ ಉಳಿವಿನ ಕುರಿತು ಚಿಂತನ-ಮಂಥನ ನಡೆಸಿದರು. ಕಲೆಯ ಪರಂಪರಾಗತ ಸಂಪ್ರದಾಯದ ಹಿರಿಮೆಯನ್ನು ಹಾಗೂ ಅರಿವನ್ನು ಯುವ ಕಲಾವಿದರಲ್ಲಿ ಮೂಡಿಸಿ ತಿಳಿಸಿ ಹೇಳುವ ಸಲುವಾಗಿ 1995ರ ಮಾರ್ಚ್ ತಿಂಗಳ ಇಪ್ಪತ್ತೇಳರಿಂದ ಏಪ್ರಿಲ್ ಐದರವರೆಗೆ 'ಪುನಃಶ್ಚೇತನ ಕಾರ್ಯಾಗಾರ'ವನ್ನು ಉಡುಪಿಯ ಎಂ.ಜಿ.ಎಂ. ಕಾಲೇಜಿನ 'ಗೀತಾಂಜಲಿ' ಸಭಾಭವನದಲ್ಲಿ ಹಮ್ಮಿಕೊಂಡ ಕಾರಂತರು ಆಸಕ್ತ ಕಲಾವಿದರನ್ನು ಆಹ್ವಾನಿಸಿದ್ದರು. ಆ ಒಂಭತ್ತು ದಿನಗಳಲ್ಲಿ ಶಿಬಿರಾರ್ಥಿಯಾಗಿ ಭಾಗವಹಿಸಿದ ನನಗೆ ಇಂದಿಗೂ ಆ ದಿನಗಳು ಅವಿಸ್ಮರಣೀಯವಾಗಿವೆ. ತೊಂಭತ್ತನಾಲ್ಕರ ಹರೆಯದ ಕಾರಂತರು ಬೇಸಿಗೆಯ ಆ ದಿನಗಳಲ್ಲಿ ಇಪ್ಪತ್ನಾಲ್ಕರ ತರುಣನಂತೆ ಹುಮ್ಮಸ್ಸಿನಿಂದ ಪ್ರತೀದಿನವೂ ಲವಲವಿಕೆಯಿಂದ ತರಗತಿಯಲ್ಲಿ ಬೋಧಿಸುತ್ತಿದ್ದರು. 'ಅಪ್ಪಟ ಕಲಾಪ್ರೇಮಿ ಕಾರಂತರು ಎನ್ನುವುದಕ್ಕೂ ಬೇರಾವುದೇ ನಿದರ್ಶನಗಳು ನನಗೆ ಬೇಕಾಗಿಲ್ಲ.

'ಚಂದದಿಂದ ಬಂದಳಬ್ಜಲೋಚನೆ' ಎನ್ನುವ ಭಾಗವತರ ಮೋಹನ ಕಲ್ಯಾಣಿರಾಗ ಆದಿತಾಳಕ್ಕೆ ಕಾರಂತರು ನೈಜವಾಗಿ ಹೆಣ್ಣು ತನ್ನನ್ನೂ ಅಲಂಕಾರಗೊಳಿಸುವ ಕ್ರಮವನ್ನು ನೃತ್ಯಾಭಿನಯದಲ್ಲಿ ಅಭಿವ್ಯಕ್ತಿಸುವುದನ್ನು ಕಂಡು ಶಿಬಿರಾರ್ಥಿಗಳಾದ ನಮಗೆ ವಿಸ್ಮಯ. ಕಾರಂತರ ಕಲಾತನ್ಮಯತೆ ಕಂಡು ಅವರ ಬಗ್ಗೆ ಅನನ್ಯ ಗೌರವ ಭಕ್ತಿ ಮೂಡಿದ್ದು ಅವರ ಸಾಮೀಪ್ಯವಿರುವ ನಾವು ಧನ್ಯರಾದೆವು ಎಂದೆನಿಸಿತು. ಪ್ರಖ್ಯಾತರಾದ ಭಾಗವತರು ಹೇಳಿದ ಪದಗಳ ಧ್ವನಿಸುರುಳಿಗಳನ್ನು ಕೇಳಿ ತಿಳಿದುಕೊಳ್ಳುವ, ಅದೇ 'ಮಟ್ಟ'ನ್ನು ಅನುಸರಿಸಿಕೊಂಡು ಪದಗಳನ್ನು ಹೇಳುವ ಕ್ರಮವನ್ನು ಬೆಳೆಸಿಕೊಳ್ಳುವತ್ತ ಕಾರಂತರ ಮಾರ್ಗದರ್ಶನವನ್ನು ನಾನು ಇಂದಿಗೂ ಸ್ಮರಿಸುತ್ತೇನೆ. ಅವರ ದೃಷ್ಟಿಯಲ್ಲಿ ಭಾಗವತನೇ ಯಕ್ಷಗಾನ ಪ್ರದರ್ಶನದ ಒಳಿತು ಕೆಡುಕುಗಳಿಗೆ ಪ್ರಥಮ ಹೋಣೆಗಾರಿಕೆ ಹೊತ್ತವನು. ಕೀಳು ಅಭಿರುಚಿಯನ್ನು ಪ್ರೇಕ್ಷಕರು ಎಂದಿಗೂ ನಿರೀಕ್ಷಿಸುವುದಿಲ್ಲ. ''ಕಲಾವಿದರು ಪಾತ್ರವರಿತು ಕಲೆಯನ್ನು ಪ್ರದರ್ಶಿಸುವಲ್ಲಿ ತಮ್ಮ ವೈಯುಕ್ತಿಕ ಅಹಂಗಳನ್ನು ತೊರೆದು ಪರಸ್ಪರ ಸಮಾಲೋಚಿಸಿ ಪ್ರದರ್ಶನವು ಮೌಲ್ಯಯುತ ಹಾಗೂ

ಗೌರವಯುಕ್ತವಾಗಿರುವಂತೆ ನೋಡಿಕೊಳ್ಳಬೇಕು ''-ಇವು ಕಾರಂತರು ಯಕ್ಷಗಾನ ಕಲೆಯ ಬಗ್ಗೆ ತಳೆದ ಧೋರಣೆಗಳಲ್ಲಿ ಕೆಲವು. ಅವರ ಧೋರಣೆಗಳನ್ನೆಲ್ಲಾ ಒಟ್ಟಾಗಿ ಈ ಕೆಳಕಂಡಂತೆ ಅಭಿಪ್ರಾಯಗಳನ್ನು ನಾನು ತಳೆದಿದ್ದೇನೆ.

''ಸಂಪ್ರದಾಯ ಯಕ್ಷಗಾನ ಕಲೆಯು ಸಮಷ್ಟಿಯಾಗಿ ಪ್ರದರ್ಶಿತಗೊಳ್ಳಬೇಕೆ ಹೊರತು ಕಲಾವಿದರ ಸ್ವಪ್ರತಿಷ್ಠೆಯಿಂದಲ್ಲ. ಪ್ರೇಕ್ಷಕರಿಗೆ ರಂಜನೆಯನ್ನು ನೀಡುವಲ್ಲಿ ಸದಭಿರುಚಿಯ ಬಗ್ಗೆ ಚಿಂತಿಸಿ ತೀರ್ಮಾನಿಸಬೇಕೇ ಹೊರತು ಅಸಭ್ಯ ಅಸಹ್ಯ ಮತ್ತು ಅಶ್ಲೀಲ ಮಾರ್ಗಗಳನ್ನು ಅನುಕರಿಸುವುದಲ್ಲ. ಭಾಗವತನ ನಿಯಂತ್ರಣದಿಂದ ಹೊರತಾದ ಪ್ರದರ್ಶನವು ದುರವ್ಯಪಸ್ಥಕರ. ಚೌಕಿಯಲ್ಲಿ ಆ ದಿನದ ಪ್ರದರ್ಶನದ ಕುರಿತು ಪರಸ್ಪರ ಅಭಿಪ್ರಾಯ ಹಾಗೂ ವಿಚಾರ ವಿನಿಮಯಗಳನ್ನು ಕಲಾವಿದರು ಮಾಡಿಕೊಂಡಲ್ಲಿ ಪ್ರದರ್ಶನವು ಉತ್ತಮವಾಗಿ ಕಲಾಮೌಲ್ಯವು ರಕ್ಷಿಸಲ್ಪಡುತ್ತದೆ. ಯಾವುದಕ್ಕೂ ಪ್ರಥಮವಾಗಿ ಯಕ್ಷಗಾನದ ಉತ್ತಮ ಸಂಸ್ಕಾರವನ್ನು ತಿಳಿದು ಜೀರ್ಣಿಸಿಕೊಳ್ಳುವುದು ಅತೀ ಮುಖ್ಯ.'' ಕಾರಂತರು ಯಕ್ಷಗಾನ ಸಂಪ್ರದಾಯದ ಬಗ್ಗೆ ಎಷ್ಟೊಂದು ಕಾಳಜಿಯನ್ನು ವಹಿಸಿದ್ದರು ಎಂಬುದಕ್ಕೆ ಅವರ ಈ ನುಡಿಮುತ್ತುಗಳೇ ಸಾಕ್ಷಿ. ಯಕ್ಷಗಾನ ಕಲೆಯನ್ನು ಅಂತರರಾಷ್ಟ್ರೀಯ ಮಟ್ಟಕ್ಕೆ ಮುಟ್ಟಿಸುವಲ್ಲಿ ಕೆಲವೊಂದು ಬದಲಾವಣೆಗಳನ್ನು ಮಾಡಿ ಯಶಸ್ವಿಯಾದರೂ, ಅವರ ಅಂತರಂಗದಲ್ಲಿ ಕಲೆಯ ಮೂಲ ಸ್ವರೂಪದ ಬಗ್ಗೆ ಗೌರವ, ಪ್ರೀತಿ ಹಾಗೂ ಆಸಕ್ತಿ ಇದ್ದಿತು ಎನ್ನುವುದನ್ನು ಅವರು ಇಳಿಪ್ರಾಯದಲ್ಲಿ ಬಹಿರಂಗಪಡಿಸಿದರು. ಪ್ರಾಮಾಣಿಕ ಯಕ್ಷಗಾನ ಕಲಾವಿದರನ್ನು ಸದಾ ಗೌರವಿಸುತ್ತಿದ್ದರು. ಅವರ ಮಾಸಾಶನವನ್ನು ರೂಪಾಯಿ ನೂರರಿಂದ ನೂರೈವತ್ತಕ್ಕೆ (1980 ರಲ್ಲಿ) ಏರಿಸುವಂತೆ ಕರ್ನಾಟಕ ಸರಕಾರಕ್ಕೆ ಕೇವಲ ಒಂದೇ ಒಂದು ಪತ್ರದಿಂದ ಕೊಡಿಸುವಲ್ಲಿ ನೆರವಾದ ಕಾರಂತರು ತಮ್ಮ ಜೇಬಿನಿಂದ ಕೊಟ್ಟದ್ದು ಲೆಕ್ಕಕ್ಕಿಲ್ಲದಷ್ಟು.

ಇಂದಿಗೂ ಕಾರಂತರ ಭಾವಚಿತ್ರವನ್ನಿಟ್ಟುಕೊಂಡು ಅವರ ಸ್ಮರಣೆಯನ್ನು ಮಾಡುವ ಕಲಾವಿದರು ಇದ್ದಾರೆ. ಯಕ್ಷಗಾನ ಕಲೆಯ ಉತ್ಕರ್ಷವನ್ನು ಸದಾ ಬಯಸುತ್ತಿದ್ದ ಕಾರಂತರು ಸಂಪ್ರದಾಯಕ್ಕೆ ಎಷ್ಟೊಂದು ಮಹತ್ವ ನೀಡಿದ್ದರು ಎನ್ನುವುದನ್ನು ತಿಳಿಸುವುದಕ್ಕೆ ನನಗೆ ತುಂಬಾ ಹೆಮ್ಮೆಯೆನಿಸುತ್ತದೆ. ಕಾರಂತರು ತಮ್ಮ 'ಯಕ್ಷರಂಗ'ದ ಪ್ರಯೋಗವೇ ನಿಜವಾದ, ಸರಿಯಾದ ಹಾಗೂ ಶ್ರೇಷ್ಠವಾದ ಯಕ್ಷಗಾನ ಎಂಬ ಅಭಿಪ್ರಾಯವನ್ನು ಎಂದೂ ಹೊಂದಿರಲಿಲ್ಲ. ಅದಕ್ಕಾಗಿಯೇ ಅವರು ತಮ್ಮ

ಪ್ರಯೋಗಕ್ಕೆ 'ಯಕ್ಷಗಾನ ' ಎಂದು ಕರೆಯದೆ 'ಯಕ್ಷರಂಗ 'ವೆಂಬ ಪ್ರತ್ಯೇಕ ಹೆಸರಿಟ್ಟಿದ್ದರು. ಈ ಅಂಶವನ್ನು ಎಷ್ಟೋ ಮಂದಿ ಟೀಕಾಕಾರರು ಗಮನಿಸಲೇ ಇಲ್ಲವೆಂದು ಕಾಣುತ್ತದೆ. ಸಾಂಪ್ರದಾಯಿಕ ಯಕ್ಷಗಾನ ಕಲೆಗೆ ಹತ್ತಿಕೊಂಡಿದ್ದ ಲೋಪದೋಷಗಳನ್ನು ನಿವಾರಿಸಿ, ಅದರ ಕಲಾತ್ಮಕ ಸೌಂದರ್ಯವನ್ನು ಜಗತ್ತಿಗೆ ತೋರಿಸುವುದೇ ಅವರ ಏಕೈಕ ಉದ್ದೇಶ ಹಾಗೂ ಸಾಧನೆಯಾಗಿತ್ತು. ಅದರಲ್ಲಿ ಅವರು ತಮ್ಮದೇ ಆದ ಯಶಸ್ಸನ್ನೂ ಗಳಿಸಿದರು. ಈ ಲೇಖನಕ್ಕೆ ಆಧಾರವನ್ನು ಸಹೃದಯ ಓದುಗರು ಬಯಸುವುದಾದಲ್ಲಿ ಇಂದಿಗೂ ನನ್ನ ಬಳಿ ಕಾರಂತರ ಒಂಭತ್ತು ದಿನಗಳ ಶಿಬಿರದಲ್ಲಿ ನಡೆದ ಕಾರ್ಯಕ್ರಮಗಳ ಟಿಪ್ಪಣಿಗಳು ಲಭ್ಯವಿವೆ.



ಕವಿತೆ

- ಪ್ರೇಮಾಭಟ್

# ಪಯಣಿಗರು

ಒಂದೊಂದು ದಾರಿಯಲಿ ಹೊರಟಿಹರು ಪಯಣಿಗರು
ಚಂದವಾದೊಂದು ಕನಸುಗಳ ಹೊತ್ತು ನಡೆದಿಹರು
ಮನದಲ್ಲೇ ಮುಂಡಿಗೆಯ ಮೆದ್ದು ಸುಖಿಸುತ ನಡೆದಿಹರು
ಸಾಗಿಹರು ಉದ್ದುದ್ದ ಮೈಲುದ್ದ ದಾರಿಯಲಿ

ಸಂತಸದ ಸಾಗರದಲಿ ಮರೆತೆಲ್ಲವನು ನಡೆದಿಹರು
ಸಂಜೆಗತ್ತಲ ಮುನ್ನ ತಲುಪುವ ಬರದಿಂದ ಸಾಗಿಹರು
ದುಃಖ ದುಮ್ಮಾನಗಳ ಹೊತ್ತು ಕಳೆಗುಂದಿದ ಮೊಗದಲ್ಲಿ
ಮನದಲ್ಲೆ ಎಣಿಸುತ್ತ ಸಮಯವನು ದಾರಿಯಲಿ ಇವರು

ಮುದಕೊಡುವ ಪಯಣದಲಿ ಮುಂದುವರೆದವರು
ಧವಲಗಿರಿ ಗಂಗೆಯು ಪಾದಸ್ಪರ್ಶ ಪಡೆಯ ಹೊರಟವರು
ಮಂದ ಮಾರುತದ ಅಡಿಯಲ್ಲೇ ಸಾಗಿಹರು
ಸುಂದರವಾದೊಂದು ಕನಸುಗಳ ಹೊತ್ತು ನಡೆದಿಹರು

ಬಾಳ್ವೆಯ ಹೊಂಗನಸುಗಳ ಸವಿದು ಚಪ್ಪರಿಸುತ
ವಧು ಪರೀಕ್ಷೆಯ ನಡೆಸಿ ನೀರಿಕ್ಷೆಯಲಿಹರು
ಒಬ್ಬೊಬ್ಬರದೊಂದೊಂದು ದಾರಿಯದು ಸುಗಮ
ಸಾಗಿಹರು ಮುಂಜಿನಲಿಬ್ಬುತ್ತ ವೃಕ್ಷಗಳು ಕರಗಿರಲು

Published by - P.C. CHADAGA, Secretary, Shivarama Karantha Vedike (R)
'Adarsha', #307, 17th Cross, 2nd Block, R.T. Nagar, Bangalore - 560 032
Ph : 23336822, Edited by - B.V. KEDILAYA
Printed at - RAVI SCREENS, Vijayanagar, Bangalore - 40 - Ph : 23395871